ಮನೋಹರ ಗ್ರಂಥಮಾಲೆಯ ೬೯ನೆಯ ಕುಸುಮ

# ನಟಸಾರ್ವಭೌಮ

(ಸಾಮಾಜಿಕ ಕಾದಂಬರಿ)

ಬರೆದವರು:

ಅ. ನ. ಕೃಷ್ಣರಾಯರು

೧೯೪೪

ಮನೋಹರ ಗ್ರಂಥ ಪ್ರಕಾಶನ ಸಮಿತಿ

ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :—

ಶ್ರೀ. ದ. ರಾ. ಬೇಂದ್ರೆ, ಎಂ. ಎ

ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ್)

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ.

ಸಂಪಾದಕ :

ಜಿ. ಬಿ. ಜೋಶಿ


ಮನೋಹರ ಗ್ರಂಥಮಾಲೆಯ ಶಾಖಾ ಕಚೇರಿಗಳು

ನೀಲಗಿರಿ ರೋಡ್, ಮೈಸೂರು

ಸ್ಟೇಶನ್ ರೋಡ್, ಗದಗ

ಮುದ್ರಕರು:

ಆರ್. ಎನ್. ಹಬ್ಬು

ಉಷಾ ಪ್ರೆಸ್, ನೀಲಗಿರಿ ರೋಡ್,

ಮೈಸೂರು.

ಪ್ರಕಾಶಕರು:

ಜಿ. ಬಿ. ಜೋಶಿ,

ಮನೋಹರ ಗ್ರಂಥಮಾಲಾ,

ಧಾರವಾಡ.

# ನಟಸಾರ್ವಭೌಮ

ಪಟೇಲ ನಿಂತೇ ಇದ್ದ. ನಿಂತು ನಿಂತು ಅವನ ಕಾಲುಗಳು ಸೋಲುತ್ತ ಬಂದಿದ್ದವು. ಹೆಡ್ ಗುಮಾಸ್ತರು ಕತ್ತೆತ್ತಿ ನೋಡಲಿಲ್ಲ. ಕಾಗದದ ರಾಶಿಯಲ್ಲಿ ಮುಳುಗಿದ್ದ ಅವರ ತಲೆ ಅತ್ತಿತ್ತ ಚಲಿಸಲಿಲ್ಲ. ಲೇಖನಿ ಒಂದೇ ಸಮನಾಗಿ ಓಡುತ್ತಿತ್ತು.

"ಸೋಮಿ, ಸೋಮಿ"

ಗುಮಾಸ್ತರ ಚಿತ್ತ ಚಲಿಸಲಿಲ್ಲ.

ಕೂಡಲೆ ಬೆಳ್ಳಿ ತಗಡಿನ ಧ್ವನಿಯಾಯಿತು. ಗುಮಾಸ್ತರು ಕಣ್ಣು ಬಿಟ್ಟು ನೋಡಿದರು.

"ಏನ ರಂಗಪ್ಪಾ, ಯಾವಾಗ ಬಂದೆ?"

ಮಾತಿನ ಜತೆಯಲ್ಲಿ ಕೈ ಕೆಲಸಮಾಡಿತು. ರೂಪಾಯಿಗಳು ಗುಮಾಸ್ತರ ಕಿಸೆ ಸೇರಿದವು.

"ಅಮಲ್ದಾರ್ರಿಗೆ ಅರಿಕೆ ಮಾಡಿಕೊಂಡಿದ್ದೆ."

"ಏನು ವಿಷಯ?"

"ಊರ ಮುಂದೆ ಎಂಟು ಗೋಣಿಮರ ಅವೆ. ಇಟ್ಟಿಗೆ ಗೂಡು ಆಕಿಸ್ಬೇಕು. ದಣ್ಯೋರು ಮನಸ್ಮಾಡಿ ಕೊಡಿಸ್ಕೊಟ್ರೆ."

"ಅದಕ್ಕೆ ನಾಲ್ಕೈದು ದರಖಾಸ್ತು ಬಂದಿದೆಯಲ್ಲಯ್ಯಾ".

"ಅದಕ್ಕೆ ತಮ್ಮತಾವ ಬಂದೆ ಬುದ್ದಿ. ತಾವು ಮನಸ್ಸು ಮಾಡಿದರೆ...."

"ಎಷ್ಟಕ್ಕೆ ಕೇಳಿದ್ದಿ?"

"ಮೂರು ರುಪಾಯಿನ ಹಾಗೆ."

"ಸರಿ, ಎಲ್ಲಾದರೂ ಉಂಟೇ? ದ್ಯಾವಣ್ಣ ಎಂಟು ರೂಪಾಯಿ ಕೊಡೋಕೆ ಒಪ್ಕೊಂಡಿದ್ದಾನೆ."

"ತಮ್ಮಗ ಬುದ್ಧಿ. ನಾಳೆ ಜಮಾಬಂದೀಗೆ ಬಂದಾಗ ಅಮುಲ್ದಾರ್ನ ಅಂಗೆ ಕರ್ಕೊಂಡು ಬಂದು ಮರಗಳನ್ನ ಕೊಡ್ಸಿದ್ರೆ ದೊಡ್ಡ ಉಪಕಾರ ವಾಗತ್ತೆ."

"ಸರ್ಕಾರ ಲೂಟಿಯಾಗಿ ಬಿಡತ್ತೆ ಅಷ್ಟೇ".

"ತಮ್ಮ ಎಸರೇಳಿ ಮನೆ ಕಟ್ಕೊಂತೀನಿ ಬುದ್ಧಿ....ತಮಗೂ........"

"ಏನ್ನಮಗೆ?"

"ಒಂದು ಹಸ್ತ".

"ನಿಂಗೆ ಎಂಟು ಹಸ್ತ ಲಾಭವಾಗೋವಾಗ ನಂಗೆ ಒಂದು ಹಸ್ತವೋ. ಎರಡಾದರೂ ಕೊಡೋ ಹಾಗಿದ್ರೆ ಪ್ರಯತ್ನ ಮಾಡ್ತೀನಿ."

"ತಮ್ಮ ಚಿತ್ತ ಬುದ್ಧಿ........"

"ಆಗಲಿ ಹೋಗು........ಮನೆಗೆ ಬಂದಿಷ್ಟು ರಾಗಿ, ಬೆಲ್ಲ ಕಳುಹಿಸಿಬಿಡು."

"ಮತ್ತೆ ಯಾವಾಗ ಬರ್ಲಿ ಬುದ್ಧಿ...."

"ನಿಮ್ಮೂರಿಗೆ ಬರ್ತೀನಲ್ಲಾ........... ಅಲ್ಲೇ ಕಾಗದ ಕೊಡಿಸ್ತೀನಿ"

"ಅಪ್ಪಣೆ ಬುದ್ಧಿ..........."

ರಂಗಪ್ಪ ಸಂತೋಷದಿಂದ ಹೊರಟುಹೋದ. ಹೆಡ್ ಗುಮಾಸ್ತರು ಯಾವ ಭಾವವನ್ನೂ ಪ್ರಕಟಿಸದೆ ಅಮುಲ್ದಾರರ ಕೋಣೆಗೆ ಕಾಗದಗಳನ್ನು ತೆಗೆದುಕೊಂಡು ಹೋದರು.

ಹೆಡ್ ಗುಮಾಸ್ತ ನರಸಿಂಹಾಚಾರ್ಯರೆಂದರೆ ಒಂದು ತಾಲ್ಲೂಕಿನ ಧಣಿ ಎಂದು ಹೆಸರಾಗಿದ್ದರು. ಅವರ ಕಣ್ಣುಮುಂದೆ ಅನೇಕ ಅಮುಲ್ದಾರುಗಳು ಹಾದು ಹೋಗಿದ್ದರು. ಯಾರೂ ನರಸಿಂಹಾಚಾರ್ಯರ ಮೇಲೆ ತುಟಿ ಪಿಟಕ್ಕೆಂದಿರಲಿಲ್ಲ. ಇಡೀ ಸರ್ಕಾರ ನಡೆದಿದ್ದುದು ತಾಲ್ಲೂಕು ಕಛೇರಿಗಳಿಂದ. ತಾಲ್ಲೂಕು ಕಛೇರಿಗಳು ನಡೆದಿದ್ದುದು ನರಸಿಂಹಾಚಾರ್ಯರಂತಹ ಕೆಲವು ವ್ಯಕ್ತಿಗಳಿಂದ. ದೊಡ್ಡ ಸಂಬಳ ತೆಗೆದುಕೊಂಡು, ಮೂರಂಗುಲ ಜರತಾರಿ ರುಮಾಲು ಹಾಕಿಕೊಂಡು ಡೌಲಿನಲ್ಲಿ ಅಮುಲ್ದಾರುಗಳು ಕಾಲ ಹಾಕುತ್ತಿದ್ದರು. ತಾಲ್ಲೂಕಿನ ಸಮಸ್ತ ಇತಿಹಾಸ, ಲೆಕ್ಕಪತ್ರ, ಜಮಾಬಂದಿ ಗೊತ್ತಿದ್ದುದು ಹೆಡ್ ಗುಮಾಸ್ತರುಗಳಿಗೇ. ಅವರ ಲೆಕ್ಕವೆಂದರೆ ಒಂದು ಶ್ರೀಚಕ್ರವಿದ್ದಹಾಗೆ. ಅಮುಲ್ದಾರುಗಳಿಂದ ಫೈನಾನ್ಷಿಯಲ್ ಸೆಕ್ರೆಟರಿಗಳ

ವರಿಗೆ ಯಾರು ಲಾಗಾಹಾಕಿದರೂ ಅದರ ತಲೆಬಾಲ ಗೊತ್ತಾಗುತ್ತಿರಲಿಲ್ಲ. ಅಮಲ್ದಾರುಗಳು ತಮ್ಮ ನಿಸ್ಸಹಾಯಕತೆಯನ್ನು ಅರಿತುಕೊಂಡು ಗುಮಾಸ್ತರ ಮರ್ಜಿ ಹಿಡಿದು ಕಾಲಹಾಕುತ್ತಿದ್ದರು.

ನರಸಿಂಹಾಚಾರ್ಯರು ಕಛೇರಿಯಲ್ಲಿ ಒಂದು ಪದ್ಧತಿಯನ್ನೇ ಸ್ಥಾಪಿಸಿದ್ದರು. ಅವರು ಕತ್ತೆತ್ತಿ ನೋಡುತ್ತಿರಲಿಲ್ಲ. ಯಾರ ಜತೆಯಲ್ಲಿಯಾದರೂ ಮಾತನಾಡಬೇಕೆಂದರೆ ಮೇಜಿನ ಮೇಲೆ ಬೆಳ್ಳಿಯ ತಗಡಿನ ಧ್ವನಿಯಾಗಬೇಕು. ಮಾತನಾಡುವ ಹೊತ್ತು, ರೀತಿಗಳು ಬೆಳ್ಳಿಯ ಪ್ರಮಾಣದ ಮೇಲೆ ಹೋಗುತ್ತಿದ್ದವು. ಇದು ಮಾಮೂಲಾಗಿದ್ದುದರಿಂದ ಇತರ ಗುಮಾಸ್ತರೇ ಆಗಲಿ ಕಛೇರಿ ಕೆಲಸಕ್ಕೆ ಬರುವ ಪಟೇಲ ಶಾನುಭೋಗರೇ ಆಗಲಿ ಪ್ರತಿ ಹೇಳುತ್ತಿರಲಿಲ್ಲ.

ಇಂತಹ ಸ್ಥಿರಪಟ್ಟ ನರಸಿಂಹಾಚಾರ್ಯರಿಗೆ ಒಮ್ಮೆಲೇ ಲಭಿಸಿರಲಿಲ್ಲ. ತಾಲ್ಲೂಕು ಕಛೇರಿಯಲ್ಲಿ ಇಪ್ಪತ್ತು ವರ್ಷಗಳ ಮೇಲೆ ಅವರ ಸರ್ವಿಸಾಗಿತ್ತು. ಕೆಲವು ಸಲ ಹೊಸದಾಗಿ ಬರುತ್ತಿದ್ದ ಎಳೆಪ್ರಾಯದ ಅಮಲ್ದಾರರ ಕೈಗೆ ಸಿಕ್ಕಿ ಸ್ವಲ್ಪ ಕಷ್ಟವೂ ಪಟ್ಟಿದ್ದರು. ಆದರೆ ಆ ಸಲಗಗಳನ್ನು ಪಳಗಿಸುವ ಕಲೆ ನರಸಿಂಹಾಚಾರ್ಯರಿಗೆ ಚೆನ್ನಾಗಿ ಸಾಧಿಸಿತ್ತು.

ಒಂದು ಸಲ ನರಸಿಂಹರಾಜಪುರದಿಂದ ವರ್ಗವಾಗಿ ವೆಂಕಟಪ್ಪನವರು ಅಮಲ್ದಾರರಾಗಿ ಬಂದರು. ಲಂಚ ರುಷುವತ್ತೆಂದರೆ ವೆಂಕಟಪ್ಪನವರು ಕಿಡಿಕಿಡಿಯಾಗುತ್ತಿದ್ದರು. ಅವರು ಬರುವಾಗಲೇ ನರಸಿಂಹಾಚಾರ್ಯರ ಕೀರ್ತಿಯನ್ನು ಸಾಕಷ್ಟು ಕೇಳಿದ್ದರು. ಮೊದಲಿನಿಂದಲೂ ಹೆಡ್ ಗುಮಾಸ್ತರ ವಿಷಯದಲ್ಲಿ ಖಡಾಖಂಡಿತವಾಗಿ ಇರತೊಡಗಿದರು. ಎರಡು ತಿಂಗಳು ನೌಕರಿ ಮಾಡುವುದರೊಳಗಾಗಿ ವೆಂಕಟಪ್ಪನವರಿಗೆ ಸಾಕುಸಾಕಾಗಿ ಹೋಯಿತು. ಕಾಗದಗಳು ಒಂದೂ ಸಿಕ್ಕುತ್ತಿರಲಿಲ್ಲ. ಮೇಲಿನ ಅಧಿಕಾರಿಗಳಿಂದ ಬರುತ್ತಿದ್ದ ನಿರೂಪಗಳು ಇದ್ದಲ್ಲಿಯೇ ಕಾಣೆಯಾಗುತ್ತಿದ್ದವು. ತಾಲ್ಲೂಕು ಇನ್‌ಸ್ಪೆಕ್ಷನಿಗೆ ರೆವಿನ್ಯೂ ಕಮಿಷನರ್ ಸಾಹೇಬರು ಬಂದಿದ್ದಾಗ ವೆಂಕಟಪ್ಪನವರ ಆಲಸ್ಯವನ್ನು ಕಂಡು ಅವರು ಎಲ್ಲರೆದುರಿಗೆ ಅಮಲ್ದಾರರನ್ನು ಚೆನ್ನಾಗಿ ಛೀಮಾರಿಮಾಡಿದ್ದರು. ಅಮಲ್ದಾರರು ತಮ್ಮ ಶಿಸ್ತು, ಸತ್ಯಸಂಧತೆ ಏನೂ ನಡೆಯುವುದಿಲ್ಲವೆಂದು ತಿಳಿದು ನರಸಿಂಹಾಚಾರ್ಯರನ್ನು ಶರಣು ಹೋದರು.

ಅಂದಿನಿಂದ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆದುಕೊಂಡು ಹೋಗುತ್ತಿದ್ದವು. ನರಸಿಂಹಾಚಾರ್ಯರ ಕೋಡು ಇನ್ನೊಂದಂಗುಲ ಬೆಳೆದಂತಾಯಿತು. ನರಸಿಂಹಾಚಾರ್ಯರನ್ನು ನೋಡಿದವರು ಯಾರೂ ಅವರು ಈಷ್ಟು ಗಟ್ಟಿಗರೆಂದು ಹೇಳಲಾಗುತ್ತಿರಲಿಲ್ಲ. ಸಾಧಾರಣ ರುಮಾಲು, ಕುತ್ತಿಗೆ ಮುಚ್ಚುವ ಅಂಗಿ, ದೊಡ್ಡ ಅಂಚಿನ ಧೋತ್ರ, ಕೈಯಲ್ಲಿ ಒಂದು ಚುಟಿಕೆ ನಶ್ಯ—ಈ ವೇಷಭೂಷಣ ಆಚಾರ್ಯರನ್ನು ಎಡೆಬಿಡುತ್ತಿರಲಿಲ್ಲ. ಕುಳ್ಳನೆಯ ಪ್ರಾಣಿ, ಎಣ್ಣೆಗೆಂಪು ಬಣ್ಣ, ಅವರ ಮುಖದ ಮೇಲಿದ್ದ ಒಂದು ವೈಶಿಷ್ಟ್ಯವೆಂದರೆ ಅವರ ಗಡ್ಡ. ಆಚಾರ್ಯರಿಗೆ ಕೆನ್ನೆಯ ಮೇಲೆ ಕೂದಲೇ ಬೆಳೆಯುತ್ತಿರಲಿಲ್ಲ. ಗಡ್ಡದ ಕೆಳಗೆ ಮಾತ್ರ ಹೊಲದ ಕೂಳೆಯ ಹಾಗೆ ಸ್ವಲ್ಪ ಸ್ವಲ್ಪ ಬೆಳೆಯುತ್ತಿತ್ತು. ಆದರಿಂದ ಅವರಿಗೆ ಅನುಕೂಲವೆ ಆಗಿತ್ತು. ಮೇಲಿಂದ ಮೇಲೆ ಕ್ಷೌರ ಮಾಡಿಸಿಕೊಳ್ಳುವ ಕಷ್ಟ ತಪ್ಪಿತ್ತು.

ಆಚಾರ್ಯರಿಗೆ ಮನೆಯಲ್ಲಿ ಅಷ್ಟು ಸುಖವಿರಲಿಲ್ಲ. ಇದ್ದ ಒಬ್ಬ ಹೆಂಡತಿ ತೀರಿಕೊಂಡು ನಾಲ್ಕುವರ್ಷಗಳು ಕಳೆದಿದ್ದುವು. ನೆಂಟರಿಷ್ಟರು, ಬಂಧುಬಾಂಧವರು ಎಷ್ಟು ಹೇಳಿದರೂ ಎರಡನೆಯ ಮದುವೆ ಮಾಡಿಕೊಂಡು ಹೆಂಡತಿಯ ಕಾಸ್ತಾರನಾಗಿ ಬಾಳುವುದಕ್ಕೆ ಆಚಾರ್ಯರು ಸುತರಾಂ ಒಪ್ಪಿರಲಿಲ್ಲ. ಬೆಳಿಗ್ಗೆಯಿಂದ ಸಂಜೆಯವರೆಗೆ ದುಡಿದು ಮನೆಗೆ ಹೋದರೂ ನೀನೇ ಅನ್ನುವವರು ದಿಕ್ಕಿರಲಿಲ್ಲ. ಆ ದುಃಖವನ್ನು ಆಚಾರ್ಯರು ತಮ್ಮ ಗೆಳೆಯರೊಂದಿಗೆ ಇಸ್ಪೀಟ ಆಟದಲ್ಲಿ ಮರೆಯುತ್ತಿದ್ದರು.

ಜೀವಕ್ಕ ಮೊದಲಿನಿಂದಲೂ ಆಚಾರ್ಯರ ಸಂಸಾರಕ್ಕೆ ಮೀಸಲಾಗಿ ಬಿಟ್ಟಿದ್ದಳು. ಹೆಸರಿಗೆ ಮದುವೆಯಾಯಿತು. ಗಂಡನ ಮುಖ ನೋಡುವಷ್ಟರಲ್ಲಿ ಆ ಪುಣ್ಯಾತ್ಮ ಕಣ್ಣು ಮುಚ್ಚಿಕೊಂಡು ಬಿಟ್ಟ. ಅಣ್ಣನ ಮನೆಯಲ್ಲಿಯೇ ಆಕೆ ತನ್ನ ಜೀವಮಾನವನ್ನೆಲ್ಲಾ ಕಳೆದಿದ್ದಳು. ಜೀವಕ್ಕ ಮನೆಯಲ್ಲಿಲ್ಲದಿದ್ದರೆ ಆಚಾರ್ಯರ ಪಾಡು ನಾಯಿಪಾಡಾಗುತ್ತಿತ್ತು. ಹೆಂಡತಿಯ ಸಂತೋಷಾರ್ಥವಾಗಿ ಮಗ ರಾಜನಿಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆಯನ್ನು ಮಾಡಿದ್ದರು. ಅವನ ಹೆಂಡತಿ ಸೀತಮ್ಮ ಮನೆಗೆ ಬಂದಿದ್ದಳು. ನಾಲ್ಕುದಿವಸ ಅತ್ತೆಯ ಮನೆಯಲ್ಲಿ ಬಾಳುವೆ ಮಾಡುವುದರೊಳಗಾಗಿ ಅತ್ತೆ ತಮ್ಮ ಜೀವನಯಾತ್ರೆಯನ್ನು ಮುಗಿಸಿಬಿಟ್ಟಿದ್ದರು.

ಸೀತಮ್ಮನ ಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ಆದರೂ ಹುಡುಗಿ ಜಾಣೆ, ಧೈರ್ಯಸ್ಥೆ, ಒಳ್ಳೆ ತಾಯಿಯ ಮಗಳು. ಜೀವಕ್ಕನಿಗೂ ಅವಳನ್ನು ಕಂಡರೆ ಪ್ರಾಣ. ಮುರಿದ ಮನೆಯನ್ನು ನಿಲ್ಲಿಸುವ ಭಾರವನ್ನು ಹೊತ್ತು ತನ್ನ ಯೋಗ್ಯತಾನುಸಾರ ಆ ಕೆಲಸವನ್ನು ನಿರ್ವಹಿಸಿದ್ದಳು. ಒಂದೊಂದು ಸಲ ಮಡಿ ಮೈಲಿಗೆ ವಿಚಾರದಲ್ಲಿ ಜೀವಕ್ಕನಿಗೂ ಸೀತಮ್ಮನಿಗೂ ಮಾತು ಬರುತ್ತಿತ್ತು. ಸೀತಮ್ಮ ಎಷ್ಟು ಮಡಿಮಾಡಿದರೂ ಜೀವಕ್ಕನಿಗೆ ಸಮಾಧಾನ ವಾಗುತ್ತಿರಲಿಲ್ಲ. ಆದರೆ ಅವಳು ಮಡಿ ಹುಡಿ ಎಂದು ಹಾರಾಡಿದರೆ ರಾಜ ರೇಗುತ್ತಿದ್ದ. ಇತ್ತ ಗಂಡನನ್ನು ಸಮಾಧಾನ ಪಡಿಸಬೇಕು, ಇತ್ತ ಜೀವಕ್ಕ ನನ್ನು ತೃಪ್ತಿಗೊಳಿಸಬೇಕು. ಸೀತಮ್ಮ ಸ್ವಾಭಾವತಃ ಬಹು ಸೌಮ್ಯೆ. ಒಂದಲ್ಲ ನಾಲ್ಕುಮಾತು ಕೇಳುವ ಶಾಂತಗುಣ. ಕೋಪದಲ್ಲಿ ಯಾರಾದರೂ ದಂಡಿಸಿದರೆ ವಾದಕ್ಕೆ ನಿಂತು ಒಂದಕ್ಕೆ ನಾಲ್ಕು ನುಡಿಯುತ್ತಿರಲಿಲ್ಲ. ನಕ್ಕು ಸುಮ್ಮನಾಗಿಬಿಡುತ್ತಿದ್ದಳು. ಜೀವಕ್ಕನೇ ತನ್ನ ಮುಂಗೋಪಕ್ಕೆ ನಾಚಿಕೆ ಪಟ್ಟುಕೊಂಡು ಸೊಸೆಗೆ ಒಂದು ಮಿಳ್ಳೆ ತುಪ್ಪ ಹೆಚ್ಚಾಗಿ ಬಡಿಸುತ್ತಿದ್ದರು.

ಆಚಾರ್ಯರ ಹೊತ್ತೂಗೊತ್ತೂ ಒಂದೂ ನೆಪ್ಪಿನದಾಗಿರಲಿಲ್ಲ. ಸಾಮಾನ್ಯವಾಗಿ ಅವರು ರಾತ್ರಿ ಒಂದು ಗಂಟೆ ಎರಡು ಗಂಟೆಗೆ ಮುಂಚೆ ಮನೆಗೇ ಬರುತ್ತಿರಲಿಲ್ಲ. ಒಂದೊಂದು ದಿವಸ ರಾತ್ರಿ ಮನೆಗೇ ಬರುತ್ತಿರಲಿಲ್ಲ. ಜೀವಕ್ಕ ಪ್ರಶ್ನೆಮಾಡಿದರೆ "ಹಾಳು ಇಸ್ಪೀಟಿಗೆ ಕೂತೆವು, ಹೊತ್ತೇ ಗೊತ್ತಾಗಲಿಲ್ಲ ಕಣೇ ಜೀವೂ" ಎಂದು ಸಮಾಧಾನ ಹೇಳಿಬಿಡುತ್ತಿದ್ದರು. ಜೀವಕ್ಕ ಆ ಮಾತನ್ನು ನಂಬದಿದ್ದರೂ ನಂಬಿದ ಹಾಗೆ ತೋರಿಸಿಕೊಂಡು "ಒಳ್ಳೆಯ ಇಸ್ಪೀಟು...............ಬಿಡಪ್ಪಾ" ಎಂದುಬಿಡುತ್ತಿದ್ದರು.

ರಾಜ ತಂದೆಗೆ ತಕ್ಕ ಮಗನೇ ಆಗಿದ್ದ. ರಾತ್ರಿ ೧೨ ಗಂಟೆಯ ಒಳಗೆ ಮನೆ ತಲಪುವುದೆಂದರೆ ಅವನಿಗೆ ತಲೆಬೇಸರ ಬರುತ್ತಿತ್ತು. ಆದರೆ ಇಸ್ಪೀಟಿನ ಚಟವಿರಲಿಲ್ಲ. ಸಂಜೆಯೆಲ್ಲಾ ಕ್ರಿಕೆಟಿನಲ್ಲಿ ಕಳೆದು ಹೋಗುತ್ತಿತ್ತು. ಅನಂತರ ಪಾರ್ಕಿನಲ್ಲಿ ಕುಳಿತರೆ ರಾತ್ರಿ ಕಳೆದು ಹಗಲು ಹರಿಯುತ್ತಿತ್ತು. ಊರಿಗೆ ಯಾವದಾದರೂ ನಾಟಕದ ಕಂಪೆನಿ ಬಂದುಬಿಟ್ಟರಂತೂ ಮುಗಿದೇ ಹೋಯಿತು. ಯಾವ ನಾಟಕವನ್ನು ಎಷ್ಟು ಸಲ ನೋಡಿದರೂ ಅವನಿಗೆ ತೃಪ್ತಿಯಿಲ್ಲ. ನಾಟಕ ಹೇಗಿದ್ದರೂ ಚಿಂತೆಯಿಲ್ಲ. ಅವುಗಳನ್ನು ನೋಡು

ತ್ತಿರಬೇಕು. ಗೆಳೆಯರೊಂದಿಗೆ ಚರ್ಚೆಮಾಡುತ್ತಿರಬೇಕು. ತಾಯಿಯಿಲ್ಲದ ಮಗ ಎಂದು ಆಚಾರ್ಯರು ಮಗನನ್ನು ದಂಡಿಸುತ್ತಿರಲಿಲ್ಲ. ಆದರೆ ಸೀತಮ್ಮ ಕಾದುಕಾದು ದಣಿಯುವಳು. ಗಂಟೆಗಳನ್ನು ಎಣಿಸುತ್ತಾ ಕುಳಿತಿರುವಳು. ಕೈಯಲ್ಲಿ ನೆಪಮಾತ್ರಕ್ಕೆ ಒಂದು ಪುಸ್ತಕ. ಜೀವಕ್ಕ ತಲೆ ಕೆಳಗೊಂದು ಮಣೆಯನ್ನು ಕೊಟ್ಟುಕೊಂಡು ಒಂದು ನಿದ್ರೆತೆಗೆದು ಏಳುತ್ತಿದ್ದರು. ಆಗಲೂ ಸೀತಮ್ಮ ಎಚ್ಚರವಾಗಿಯೇ ಇರುತ್ತಿದ್ದಳು.

"ಸೇರಿದಷ್ಟು ಊಟಮಾಡಿ ಮಲಗಿಕೊ ಹೋಗು ತಾಯಿ. ಅವನು ಎಷ್ಟು ಹೊತ್ತಿಗೆ ಬರುತ್ತಾನೋ ಏನೋ?"

"ಅವರೂ ಬಂದು ಬಿಡಲಿ."

"ಬಂದಮೇಲೆ ಬೇಕಾದರೆ ಎದ್ದು ಬಡಿಸುವಿಯಂತೆ, ದಿನಾ ಹೀಗೆ ಜಾಗರಣೆ ಮಾಡಿದರೆ ನಿನ್ನ ಮೈಗಾಗತ್ತೆಯೇ, ಎಳೆ ಕರುಳು."

"ಬೆಳಿಗ್ಗೆ ಅವಸರದಲ್ಲಿ ಊಟಮಾಡಿ ಹೋದವರು, ಅವರು ಹಸಿದು ಬರುವಾಗ ನಾನು ತಿಂದು ಕೂಡುವುದೇ?"

"ಅವನಿಗೇನು ಧಾಡಿ. ಊರತುಂಬ ಸ್ನೇಹಿತರು. ಎಲ್ಲೋ ತಿಂಡಿ ತೀರ್ಥ ಆಗಿರತ್ತೆ."

"ಇನ್ನೇನು ಬರುವ ಹೊತ್ತಾಯಿತು ಜೀವಕ್ಕ" ಎಂದು ಕೊನೆಯ ಮಾತನ್ನು ಹೇಳಿಬಿಡುತ್ತಿದ್ದಳು. ಈ ವ್ರತ ಬಿಡಿಸುವುದಕ್ಕೆ ರಾಜನೂ ಕಲಿತ ಬುದ್ಧಿಯನ್ನೆಲ್ಲಾ ಖರ್ಚು ಮಾಡಿದ. ಗದರಿಸಿದ, ಬಯ್ದು, ಒಳ್ಳೆಯ ಮಾತಿನಲ್ಲಿ ಹೇಳಿನೋಡಿದ. ಸೀತಮ್ಮ ಜಪ್ಪಯ್ಯ ಎನ್ನಲಿಲ್ಲ.

"ಹೋಗಲಿ ಬಿಡು ನಿನ್ನ ಕರ್ಮ" ಎಂದು ಸುಮ್ಮನಾಗಿಬಿಟ್ಟ. ತಾನು ಮನೆಗೆ ಬೇಗ ಬಂದರೆ ಈ ಸಮಸ್ಯೆ ಪರಿಹಾರವಾಗುತ್ತದೆಯೆಂದು ರಾಜನಿಗೆ ಗೊತ್ತಿತ್ತು. ಆದರೆ ಉದ್ಯಾನದ ರಮ್ಯತೆಯಲ್ಲಿ ಹೆಂಡತಿಯ ನಿರೀಕ್ಷೆ ಮರೆತೇ ಹೋಗುತ್ತಿತ್ತು. ನಾಟಕಗಳ ಕಲಾಹೊನಲಿನಲ್ಲಿ ಅವನ ನಿರ್ಧಾರಗಳೆಲ್ಲಾ ಕೊಚ್ಚಿಕೊಂಡು ಹೋಗುತ್ತಿದ್ದವು.

೨

ರಾಜ ಕಾಲೇಜಿನಲ್ಲಿ ಜಾಣ ಎನಿಸಿಕೊಳ್ಳದಿದ್ದರೂ ಕೋಣ ಎನಿಸಿಕೊಂಡಿರಲಿಲ್ಲ. ಅವನ ವಿದ್ಯಾರ್ಥಿ ದೆಸೆ ಬಹಳ ವಿಜೃಂಭಣೆಯಿಂದ ಸಾಗಿರ

ಲಿಲ್ಲ. ಒಂದು ಕ್ಲಾಸಿನಿಂದ ಇನ್ನೊಂದು ಕ್ಲಾಸಿಗೆ ಹೋಗುವುದೆಂದರೆ ದೊಡ್ಡ ಗಂಡಾಂತರವೇ ಆಗಿತ್ತು. ಮಗ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಎಂ. ಸಿ. ಎಸ್. ಪಾಸುಮಾಡಬೇಕೆಂದು ತಂದೆಯ ಆಸೆ. ಅದಕ್ಕೆ ಅವರು ಬೇಕಾದ ಸಾಹಸಮಾಡಿದರು. ಮನೆಗೆಬಂದು ಪಾಠ ಹೇಳುವುದಕ್ಕೆ ಬೇರೆ ಮೇಷ್ಟ್ರನ್ನು ಗೊತ್ತುಮಾಡಿದ್ದರು. ಏನಾದರೂ ರಾಜನ ವಿದ್ಯಾಭ್ಯಾಸಂಗ ಕುಂಟಿಕೊಂಡೇ ನಡೆದಿತ್ತು.

ಹೈಸ್ಕೂಲು ಕಳೆದು ಕಾಲೇಜಿಗೆ ಬಂದ ಮೇಲೆ ರಾಜನಿಗೆ ಜೀವಬಂದಂತಾಯಿತು. ಅವನ ಇಚ್ಛೆಗೆ ತಕ್ಕಹಾಗೆ ಆಟಗಳಲ್ಲಿ ಹೆಚ್ಚು ಅನುಕೂಲ ದೊರೆತಿತ್ತು. ರಾಜ ಕಾಲೇಜಿನಲ್ಲಿ ಉತ್ತಮ ಕ್ರಿಕೆಟ್ ಆಟಗಾರನೆಂದು ಹೆಸರು ಪಡೆದಿದ್ದ. ಅವನ ಕ್ರಿಕೆಟ್ ಆಟಗಾರಿಕೆಯನ್ನು ಮೆಚ್ಚಿಕೊಂಡೇ ಯುರೋಪಿಯನ್ ಪ್ರಿನ್ಸಿಪಾಲರಾದ ಬ್ರೌನ್‌ರವರು ಅವನನ್ನು ಮೊದಲನೆಯ ವರ್ಷ ಎಫ್. ಎ ಯಿಂದ ಎರಡನೆಯ ವರ್ಷಕ್ಕೆ ತೇರ್ಗಡೆ ಮಾಡಿಸಿದ್ದರು.

ಪ್ರಿನ್ಸಿಪಾಲರವರು ರಾಜನ ಮೇಲೆ ಅಭಿಮಾನ ತೋರಿಸುವುದಕ್ಕೆ ಇನ್ನೊಂದು ಕಾರಣವಿತ್ತು. ಇಂಗ್ಲಿಷಿನಲ್ಲಿ ರಾಜ ತನ್ನ ಮೇಲ್ತರಗತಿಯವರ ಹಂತಕ್ಕೂ ಮೀರಿದ ಪ್ರಾವೀಣ್ಯವನ್ನು ಪಡೆದಿದ್ದ. ದೊಡ್ಡ ದೊಡ್ಡ ಇಂಗ್ಲಿಷ್ ಗ್ರಂಥಕರ್ತರನ್ನು ಓದುವುದು ಅವನಿಗೆ ಒಂದು ಹುಚ್ಚು. ಷೇಕ್ಸ್‌ಪಿಯರಿನ ನಾಟಕಗಳಂತೂಅವನಿಗೆ ಕರತಲಾಮಲಕವಾಗಿದ್ದವು. ಷೇಕ್ಸ್‌ಪಿಯರ್‌ಕವಿಯ ನಾಟಕಗಳ ಅನೇಕ ಭಾಗಗಳನ್ನು ರಸವತ್ತಾಗಿ ಬಾಯಲ್ಲಿ ಹೇಳುತ್ತಿದ್ದನು. ಸ್ಕಾಟ್, ಡಿಕೆನ್ಸ್, ಥ್ಯಾಕರೆಯವರ ಕಾದಂಬರಿಗಳು ಒಂದನ್ನೂ ಬಿಡದೆ ಮುಗುಚಿಹಾಕಿದ್ದನು. ಇಂಗ್ಲಿಷನ್ನು ಅದರ ಶಯ್ಯೆಯಲ್ಲಿಯೇ ಸ್ಪಷ್ಟವಾಗಿ ನಿರರ್ಗಳವಾಗಿ ಮಾತನಾಡುತಿದ್ದನು. ಪ್ರಿನ್ಸಿಪಾಲರವರು ಅವನನ್ನು ಪ್ರೀತಿಯಿಂದ 'ಕಾಲೇಜ್ ಷೇಕ್ಸ್‌ಪಿಯರ್' ಎಂದು ಕರೆಯುತ್ತಿದ್ದರು.

ಕಾಲೇಜಿನ ವಾರ್ಷಿಕೋತ್ಸವ ಬಂತು. ಪ್ರಿನ್ಸಿಪಾಲರೇ ಸ್ವಯಂ ನಿಂತುಕೊಂಡು 'ರೋಮಿಯೊ ಜೂಲಿಯಟ್' ನಾಟಕವನ್ನು ಅಭ್ಯಾಸಕ್ಕೆ ತೆಗೆದುಕೊಂಡಿದ್ದರು. ರೋಮಿಯೋ ಪಾತ್ರ ರಾಜನಿಗೆ ಮೀಸಲಾಗಿತ್ತು. ಜೂಲಿಯಟ್ ಅಚ್ಯುತ ಮಾಡುವುದೆಂದೂ, ಟೈಬಾಲ್ಟ್ ದೇವದಾಸ ಮಾಡುವುದೆಂದೂ ನಿಷ್ಕರ್ಷೆಯಾಯಿತು. ರಂಗದ ಅಭ್ಯಾಸದೊಂದಿಗೆ

ಪ್ರಿನ್ಸಿಪಾಲರ ವ್ಯಾಖ್ಯಾನವೂ ಸೇರಿಕೊಂಡು ಷೇಕ್ಸ್‌ಪಿಯರ್ ಕವಿಯ ಸುಪ್ತ ಸೌಂದರ್ಯವು ರಾಜನಿಗೆ ಮನವರಿಕೆಯಾಗತೊಡಗಿತು. ತಾನು ಬಹಳ ಸಾಮಾನ್ಯವೆಂದು ಭಾವಿಸಿದ್ದ ಭಾಗಗಳಲ್ಲಿ, ಹುದುಗಿದ್ದ ಕಾವ್ಯಸೌಂದರ್ಯ ಅವನನ್ನು ಆಕರ್ಷಿಸತೊಡಗಿತು. ನಿಂತರೆ ಕುಳಿತರೆ ರೋಮಿಯೋ ಆಡಿದ ಮಾತುಗಳು, ಅವನ ನಿಶ್ಚಲ ಪ್ರಣಯ ರಾಜನಿಗೆ ಹೊಸ ಹೊಸ ಅನುಭವ ಗಳನ್ನುಂಟುಮಾಡುತ್ತಿತ್ತು.

ಮನೆಯಲ್ಲಿಯೂ ಅದೇ ಚಿಂತೆ. ಮತ್ತೆ ಮತ್ತೆ ರೋಮಿಯೋ ಮಾತುಗಳನ್ನು ತನ್ನಷ್ಟಕ್ಕೆ ಆಡಿಕೊಳ್ಳುವನು. ಸೀತಮ್ಮ ಎದುರಿಗೆ ಬಂದರೆ ಅವಳೇ ಜೂಲಿಯಟ್ ಎಂದು ಭಾವಿಸಿ ತನ್ನ ಮಾತುಗಳನ್ನು ಹೇಳುವನು.

"ಅದು ಏನೊಂದ್ರೆ ಮಾತುಗಳು ?"

"ರೋಮಿಯೋ ನಾಟಕದ್ದು............"

"ಸ್ವಲ್ಪ ಅರ್ಥಬಿಡಿಸಿ ಹೇಳಿ ಕೇಳೋಣ."

"......... ಹಾ! ಮುಂಗೈಗೆ ಕೆನ್ನೆಯನ್ನೂರೆಗೊಟ್ಟು ಹೇಗೆ ನಿಂತಿದ್ದಾಳೆ –
ನಾನು ಅವಳ ಕೈಚೀಲವಾಗಿದ್ದರೆ ಎಷ್ಟು ಭಾಗ್ಯಶಾಲಿಯಾಗುತ್ತಿದ್ದೆ!"

"ಥೂ, ಇಂತಹ ನಾಟಕಾನೆಲ್ಲಾ ಕಾಲೇಜಿನಲ್ಲಿ ಆಡತಾರೇನು?"

"ಆಡ್ತಾರೆ ಕಣೇ ಹುಚ್ಚಿ. ಪ್ರಿನ್ಸಿಪಾಲರೇ ಪಾಠ ಹೇಳಿಕೊಡುತ್ತಾ ಇದ್ದಾರೆ."

"ಸರಿ ಬಿಡಿ. ಅದಕ್ಕೇ ಇಂಗ್ಲಿಷ್ ಕಲಿಯಬಾರದೊಂತ ಹಿರಿಯರು ಹೇಳೋದು."

"ನೀನೂ ಇಂಗ್ಲಿಷ್ ಕಲಿತಿದ್ದರೆ ಸೀತಾ, ಜೂಲಿಯಟ್ ನೀನೇ ಮಾಡಿಬಿಡಬಹುದಾಗಿತ್ತು."

"ನನಗೆ ಅದೊಂದೇ ಕಡಿಮೆಯಾಗಿರೋದು. ನಿಮಗಷ್ಟು ಆಸೆಯಿದ್ರೆ ಇಂಗ್ಲಿಷ್ ಬರೊ ಇನ್ನೊಂದು ಹುಡುಗಿ ಮದುವೆಯಾದರೂ ಮಾಡಿಕೊಳ್ಳಿ. ನಿಮ್ಮ ನಾಟಕಪಾಟಕಕ್ಕೆಲ್ಲಾ ಪ್ರಯೋಜನವಾಗುತ್ತೆ."

"ಇದಕ್ಕೆ ಹೆಣ್ಣುಬುದ್ಧಿ ಅನ್ನೋದು."

"ಏನು ಹೆಣ್ಣುಬುದ್ಧಿ ?"

"ಮಂಕೊಂತ!"

"ನಿಜವಾಗಿ ಹೇಳೀಂದ್ರೆ. ನಾನು ಇಂಗ್ಲಿಷ್ ಕಲೀಲಿಲ್ಲಾ, ನಿಮಗೆ ಹೇಗೆ ಬೇಕೋ ಹಾಗಿಲ್ಲಂತೆ ನಿಮ್ಮ ಮನಸ್ಸಿಗೆ ನೋವಾಗತ್ತೆಯೇ ?"

"ಹುಚ್ಚಿ ! ನನ್ನ ಜೂಲಿಯಟ್, ಶಕುಂತಲೆ, ಬಿಯಾಟ್ರಿಸ್ ಎಲ್ಲಾ ನೀನೇ. ಇಂಗ್ಲಿಷ್ ಕಲಿತರೇ ಶೃಂಗಾರಾಂತ ತಿಳ್ಕೊಂಡಿದ್ದೀಯೇನು ?"

"ಹೌದು. ಅವರ ಹಾಗೆ ನಮಗೆ ದಾಷ್ಟೀಕವಿಲ್ಲ."

"ದಾಷ್ಟೀಕವಿಲ್ಲದಿದ್ದರೇನು—ಅನುರಾಗವಿದೆಯಲ್ಲಾ. ಇಲ್ಲಿ ಬಾ, ಹತ್ತಿರ."

"ಹೋಗೀಂದ್ರೆ............ಜೀವಕ್ಕ ಇಲ್ಲೇ ಓಡಾಡುತ್ತಾ ಇದ್ದಾರೆ. ನಿಮಗೇನು ಹೊತ್ತಿಲ್ಲ ಗೊತ್ತಿಲ್ಲ" ಎಂದು ಬಿಡಿಸಿಕೊಂಡು ಓಡಿಹೋದಳು. ಸೀತಮ್ಮ ಚೆಲುವೆಯಲ್ಲ. ಬಗಸೆಗಂಗಳೂ, ವಿಶಾಲವಾದ ಹಣೆ, ಗುಂಗುರು ಮುಂಗುರುಳು, ಸಂಪಿಗೆಯಂತಹ ಮೂಗು, ಮೀನಿನಂತಹ ಕಣ್ಣೂ ಅವಳದಾಗಿರಲಿಲ್ಲ. ಮಾಟವಾದ ಮೈಕಟ್ಟು, ಎಣ್ಣೆಗೆಂಪು ಬಣ್ಣ, ಲಕ್ಷಣವಾದ ಮುಖಚರ್ಯೆ, ತುಂಬಿದ ಸುಂದರವಾದ ಕಣ್ಣುಗಳು. ತನ್ನ ದೇಹಕೊಪ್ಪುವಂತೆ, ದೇಹಕಪ್ಪುವಂತೆ ಸೀರೆಯುಡುತ್ತಿದ್ದಳು. ಹಣೆಯ ಮೇಲೆ ತುಸು ದೊಡ್ಡದಾದ ಕುಂಕುಮ. ಆದರೆ ಅವಳ ಮಾತಿನಲ್ಲಿ ಸೆಳೆಮಿಂಚಿನ ಶಕ್ತಿಯಿತ್ತು. ಮಾತುಗಾತಿಯಲ್ಲ. ಜಾಣತನದಿಂದ ಗಂಡನನ್ನು ಮಂತ್ರಮುಗ್ಧನನ್ನು ಮಾಡುವ ರಹಸ್ಯ ಅವಳಿಗೆ ತಿಳಿದಿರಲಿಲ್ಲ. ಕೊಚ್ಚೆ ಕಸರುಗಳನ್ನು ಕೂಡಿಕೊಳ್ಳದೆ ತಿಳಿಯಾಗಿ ಹರಿಯುವ ಹೊಳೆಯಂತೆ ಅವಳ ಬಾಳನದಿ ಹರಿಯುತ್ತಿತ್ತು. ಗಂಡನನ್ನು ಹುಚ್ಚಿಯಂತೆ ಪ್ರೀತಿಸುತ್ತಿದ್ದಳು. ದೇವರಂತೆ ಪೂಜಿಸುತಿದ್ದಳು. ಬೆಳಿಗ್ಗೆ ಎದ್ದರೆ ಮೊದಲು ಅವಳು ತಲೆಬಾಗುತ್ತಿದ್ದದ್ದು ಗಂಡನ ಕಾಲುಗಳಿಗೆ, ಅನಂತರ ರಾಮದೇವರ ಕಡೆಗೆ ಲಕ್ಷ್ಯ.

ಆಡಂಬರಕ್ಕೆ ನಿಲುಕದ ಹೇಳಿಕೆಗೆ ಸಿಲುಕದ ಸೀತಮ್ಮನ ರೂಪಿನಲ್ಲಿ ರಾಜ ಅಪೂರ್ವ ಚೆಲುವನ್ನು ಕಂಡಿದ್ದ. ಬಿಸಿಲಿನ ಬೇಗೆಯಲ್ಲಿ ಬೆಂದು ಬಂದವನಿಗೆ ತಿಳಿಯಾದ ತಂಗಾಳಿ ಬೀಸಿದರೆ ಎಷ್ಟು ಹಿತವೆನಿಸುವುದೋ ಸೀತಮ್ಮನನ್ನು ಕಂಡರೆ ರಾಜನಿಗೆ ಅಷ್ಟು ಶಾಂತಿ, ತೃಪ್ತಿ ದೊರೆಯುತ್ತಿತ್ತು. ಅವಳ ಅಕೃತ್ರಿಮ ನಡೆನುಡಿಯಲ್ಲಿ ಅವನ ಬಾಳು ಮಿಂದು ಮೆರೆಯುತ್ತಿತ್ತು. ಸೌಂದರ್ಯವೆಂದು ತಾನು ಭಾವಿಕದೆಶೆಯಲ್ಲಿ ಬಗೆಯುತಿದ್ದುದನ್ನು ಅವಳಲ್ಲಿ ಕಂಡುಕೊಳ್ಳುತ್ತಿದ್ದನು.

ಅವನ ತೋಳತೆಕ್ಕೆಯಲ್ಲಿ ಮಲಗಿದ್ದಾಗ ಒಂದೊಂದು ದಿನ ಸೀತಮ್ಮನಿಗೆ ಮೊದಲೇ ನಿದ್ರೆ ಹತ್ತಿಬಿಡುತ್ತಿತ್ತು. ಎದುರಿಗೆ ಕಿಟಕಿ. ಬೆಳದಿಂಗಳು ಸೌಮ್ಯವಾಗಿ ಹರಿದು ಅವಳ ಮುಖದ ಮೇಲೆ ಚೆಲ್ಲಾಟವಾಡುತ್ತಿತ್ತು. ಪ್ರೇಯಸಿಯ ತೆಕ್ಕೆಯಿಂದ ಬಿಡಿಸಿಕೊಂಡು ಮಗ್ಗುಲಾಗಿ ಅವಳನ್ನೇ ದಿಟ್ಟಿಸಿ ನೋಡುವನು. ಪ್ರಣಯದ ಆವೇಶದಲ್ಲಿ ಕೆದರಿದ್ದ ಕೂದಲನ್ನು ಮೃದುವಾಗಿ ನೇರಗೊಳಿಸುತ್ತಾ ಆ ತನ್ನ ಪ್ರೇಮನಿಧಿಯನ್ನು ಎವೆಹಾಕದೆ ನೋಡುವನು. ಅವಳ ಮೂಗುನತ್ತು ಒಮ್ಮೊಮ್ಮೆ ಮಿಂಚುತ್ತಿತ್ತು. ಅದರ ಹೊಳಪಿಗೆ ಅವನ ಹೃದಯ ಪ್ರತಿಸ್ಪಂದಿಸುತ್ತಿತ್ತು. ನಿದ್ರೆಯಲ್ಲಿಯೂ ತನ್ನ ಧ್ಯಾನ ದಲ್ಲಿಯೇ ಲೀನಳಾಗಿ ಕೈಯನ್ನು ತನ್ನ ಮೇಲೆ ಚಾಚಿ, ತನ್ನನ್ನು ಅಪ್ಪುತ್ತಿದ್ದ ಮುಗ್ಧೆಯನ್ನು ತನ್ನ ಹೃದಯದಲ್ಲಿ ಬಚ್ಚಿಡುವನು.

ಅವಳೊಮ್ಮೆ ನಿದ್ರೆಯಲ್ಲಿ ಬಡಬಡಿಸುತ್ತಿದ್ದಳು. ಏನು ಏನೋ ಚಿಂತೆ. ಹೆಣ್ಣುಬಾಳು ಹುಟ್ಟುವಾಗಲೇ ಜಗತ್ತಿನ ಎಲ್ಲ ಜವಾಬ್ದಾರಿಗಳನ್ನೂ ಹೊತ್ತು ಬಂದಿರುತ್ತದೆ. ಜತೆಗೆ ನಲ್ಮೆಯ ಬಲವೂ ಕೂಡಿದರೆ ಮನಸ್ಸಿಗೆ ನಿರಂತರ ಚಿಂತೆ. ಆ ಚಿಂತೆಯಲ್ಲಿಯೇ ಹೆಣ್ಣುಬಾಳಿಗೆ ಒಂದು ಹಿತ. ಕನಸಿನಲ್ಲಿ ತನ್ನ ಗಂಡನಿಗೆ ಕಷ್ಟಗಳು ಬಂದಂತೆ ಕಾಣುತ್ತಿದ್ದಳು. ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ನಿದ್ರೆಯಲ್ಲಿಯೇ ಬಿಕ್ಕಳಿಸಿ ಬಿಕ್ಕಳಿಸಿ ಅಳುತ್ತಿದ್ದಳು, ರಾಜ ಅವಳನ್ನು ಎಬ್ಬಿಸಿ ಸಮಾಧಾನ ಹೇಳುತ್ತಿದ್ದನು. ತನ್ನ ಗುಟ್ಟು ಬಯಲಾಯಿತಲ್ಲಾ ಎಂದು ನಸುನಾಚಿ ಅದನ್ನು ಬಯಲು ಮಾಡಿದ ಗಂಡನ ಮೇಲೆ ಹುಸಿಕೋಪವನ್ನು ತೋರುತ್ತಿದ್ದಳು.

ಇದು ರಾಜನಿಗೆ ಮಾರನೆಯ ದಿವಸ ಒಳ್ಳೆಯ ಗ್ರಾಸವಾಗುತ್ತಿತ್ತು. ಅವಳ ಧ್ವನಿಯನ್ನೇ ಅನುಕರಿಸಿ, ರಾತ್ರಿ ಅವಳು ಕನವರಿಸಿಕೊಂಡ ಮಾತು ಗಳನ್ನು ವಿಡಂಬನಮಾಡಿ ತೋರಿಸುವನು.

ವಿಡಂಬನ ಮಾಡುವುದು ರಾಜನಲ್ಲಿ ಸಹಜವಾಗಿ ಬೆಳೆದುಬಂದಿದ್ದ ಗುಣ. ಮನೆಯಲ್ಲಿ ಮಾತ್ರವಲ್ಲ, ಕಾಲೇಜಿನಲ್ಲೂ, ಜಮುಖಾನೆಯಲ್ಲಿಯೂ ಅವನು ತನ್ನ ಕಡತ ಬಿಚ್ಚುತ್ತಿದ್ದನು. ಗೊಗ್ಗರು ಧ್ವನಿಯಲ್ಲಿ ಮಾತನಾಡುತ್ತಿದ್ದ ಕನ್ನಡ ಪಂಡಿತರು, ಸದಾ ಕನ್ನಡಕವನ್ನು ಉಜ್ಜುತ್ತಿದ್ದ ಕೆಮಿಸ್ಟ್ರಿ ಪ್ರೊಫೆಸರು, ಕುತ್ತಿಗೆ ಹಿಸುಕುತ್ತಿದ್ದ ಟೈಯನ್ನು ಅತ್ತಿತ್ತ ಚಲಿಸುತ್ತಿದ್ದ ಮೊಂಡು

ಮಿಾಸೆಯ ಇಂಗ್ಲಿಷ್ ಅಧ್ಯಾಪಕರು, ಎಲ್ಲರೂ ರಾಜನ ನಗೆಯ ಬಲೆಯಲ್ಲಿ ಸಿಕ್ಕುತ್ತಿದ್ದರು. ಕ್ರಿಕೆಟ್ ಆಟ ಮುಗಿದ ಮೇಲೆ ಆಟಗಾರರೆಲ್ಲರೂ ಕಾಫಿ, ಹರಟೆಗೆ ಕುಳಿತಾಗ ರಾಜನ ಹಾಸ್ಯಲಹರಿ ಇದ್ದೇ ತೀರಬೇಕು.

"ರೋಮಿಯೋ ಮತ್ತು ಜೂಲಿಯಟ್" ನಾಟಕದ ಅಭ್ಯಾಸ ಒಳ್ಳೆಯ ಹುರುಪಿನಿಂದ ಸಾಗಿತ್ತು. ರಾಜ ಕನ್ನಡಿಯ ಮುಂದೆ ನಿಂತು ತನ್ನ ಪಾತ್ರದ ಭಾವಗಳನ್ನು ಅಭ್ಯಾಸ ಮಾಡುತ್ತಿದ್ದ. ಕವಿಯ ಮಾತುಗಳ ಯೋಗ್ಯ ಉಚ್ಚಾರಣೆಯ ಕಡೆಗೆ ಪ್ರಿನ್ಸಿಪಾಲ್ ಸಾಹೇಬರು ವಿಶೇಷ ಲಕ್ಷ್ಯ ಕೊಟ್ಟಿದ್ದರು. ನಾಟಕ ಯಶಸ್ವಿಯಾಗಿ ನಡೆಯುವುದರಲ್ಲಿ ಸಂದೇಹವೇ ಕಂಡು ಬರುತ್ತಿರಲಿಲ್ಲ.

ನಾಟಕ ಯಶಸ್ವಿಯಾಗಿಯೇ ನಡೆಯಿತು. ಪ್ರೇಕ್ಷಕರು ಇದು ಒಂದು ಕಾಲೇಜಿನ ನಾಟಕ ಎಂಬುದನ್ನು ಮರೆತುಬಿಟ್ಟರು. ರಾಜನ ಮಾತುಮಾತಿಗೆ ಚಪ್ಪಾಳೆಯ ಸುರಿಮಳೆಯಾಗುತ್ತಿತ್ತು. ಕವಿಯ ಭಾವರಸಗಳನ್ನು ರಾಜ ನುರಿತ ಕಲಾವಿದನ ಹಾಗೆ ಅಭಿನಯಿಸಿ ತೋರಿಸುತ್ತಿದ್ದ. ಉತ್ತರಾರ್ಧದಲ್ಲಿ ರೋಮಿಯೋ

''ಸಾವು-ನಿನ್ನುಸಿರಿನ ಮಧುವನೀಂಟಿದ ಸಾವು
ನಿನ್ನ ಚೆಲುವನೀಂಟಲು ಬಲವಿಲ್ಲದಿಪುದು
ನಿನ್ನ ಗೆಲ್ಲವರಿಲ್ಲ
ಚೆಲುವಿನ ಹೆಗ್ಗುರುತು-ಚೆಂಗೆಂಪು
ಗಲ್ಲತುಟಿಗಳ ಮೇಲೆ ಮೂಡಿಹುದು
ಸಾವಿನ ಕಂದುಗುಡಿಯಿನ್ನೂ ಅತ್ತ ಚಲಿಸಿಲ್ಲ''—

ಎನ್ನುವ ಮಾತುಗಳನ್ನು ರಾಜ ಹೇಳಿದಾಗ ಪ್ರಿನ್ಸಿಪಾಲರು "ಅದ್ಭುತ ಅದ್ಭುತ" ಎಂದು ಕೂಗಿಬಿಟ್ಟರು. ಅವರ ಜತೆ ಬಂದಿದ್ದ ಪರಂಗಿ ಹೆಣ್ಣು ಮಕ್ಕಳು ಕಣ್ಣಿನಿಂದ ಕರವಸ್ತ್ರವನ್ನು ತೆಗೆಯಲಿಲ್ಲ.

ರೋಮಿಯೋ ಪಾತ್ರದಿಂದ ರಾಜನ ಖ್ಯಾತಿ ಎಲ್ಲಾ ಕಡೆಗೂ ಹಬ್ಬಿತು. ಕಾಲೇಜಿನಲ್ಲಿ ಅದೇ ಮಾತು; ಅಧ್ಯಾಪಕರ ಕೋಣೆಯಲ್ಲಿಯೂ ಅದೇ ಮಾತು. ಹುಡುಗರಂತೂ ತಮ್ಮ ಸಹಪಾಠಿಯ ವಿಜಯವನ್ನು ಕಂಡು ಹಿಗ್ಗಿದರು. ಔತಣಗಳ ಮೇಲೆ ಔತಣಗಳಾದವು. ನಟರನ್ನೆಲ್ಲಾ ಪ್ರಿನ್ಸಿಪಾಲರು ಚಹಾಕ್ಕೆ ಕರೆದು ಆದರಿಸಿ ಎಲ್ಲರಿಗೂ ಒಂದೊಂದು ಪಾರಿತೋಷಕವನ್ನಿತ್ತರು. ರಾಜನ ಪಾಲಿಗೆ ಸರ್ ಹೆನ್ರಿ ಇರ್ವಿಂಗನ ಷೇಕ್ಸ್‌ಪಿಯರ್

ನಾಟಕಗಳ ಅಭಿನಯ ಆವೃತ್ತಿಯ ಸಂಪುಟಗಳು ದೊರೆತವು. ಪುಸ್ತಕಗಳ ತುಂಬ ಸರ್ ಹೆನ್ರಿಯ ಅಭಿನಯ ಚಿತ್ರಗಳು. ರಾಜನಿಗೆ ಸ್ವರ್ಗವೇ ಬಳುವಳಿ ಬಂದಂತಾಯಿತು.

ನಾಟಕದಲ್ಲಿ ಸಿಕ್ಕಿದ ಜಯಲಾಭ ರಾಜನ ವ್ಯಾಸಂಗದ ಮೇಲೆ ಪರಿಣಾಮ ಮಾಡದೆ ಹೋಗಲಿಲ್ಲ. ಪಠ್ಯ ಪುಸ್ತಕಗಳೆಂದರೆ ತನ್ನ ಭಾಗದ ಪಿಡುಗೆಂದು ಭಾವಿಸಿದ್ದ ರಾಜನಿಗೆ ಷೇಕ್ಸ್‌ಪಿಯರಿನ ನಾಟಕಗಳು ಮುದ್ದಾದವು. ಅವನ ಚಿತ್ತ ಶಾಲೆಯಿಂದ ಸಂಪೂರ್ಣವಾಗಿ ದೂರವಾಗುತ್ತಾ ಬಂತು. ಷೇಕ್ಸ್‌ಪಿಯರಿನ ಉದಾತ್ತಪಾತ್ರಗಳಾದ ಹ್ಯಾಂಮ್ಲೆಟ್, ರಿಚರ್ಡ್, ಸೀಸರ್ ಇವರ ಮಾತುಗಳನ್ನು ಮೇಲಿಂದ ಮೇಲೆ ಓದುವುದು, ಕನ್ನಡಿಯ ಮುಂದೆ ನಿಂತು ಅಭಿನಯಿಸುವುದು ಅವನ ದಿನಚರಿಯಾಗುತ್ತಾ ಬಂತು.

ರಾಜನ ವಿಜಯ ಅವನ ಗೆಳೆಯರ ಮನಸ್ಸಿನಲ್ಲಿ ಖಚಿತವಾದ ಒಂದು ಅಭಿಪ್ರಾಯವನ್ನು ಮಾಡಿತು. ರಾಜ ಉತ್ತಮ ನಟ. ಅವನನ್ನು ಹೆಚ್ಚಾಗಿ ರಂಗಭೂಮಿಯಲ್ಲಿ ಕಾಣಿಸಬೇಕೆಂದು ಅವರು ನಿರ್ಧರಿಸಿದರು. ಅಚ್ಯುತ, ದೇವದಾಸ್ ಸಿದ್ಧರಾಗಿಯೇ ಇದ್ದರು. ಅವರ ಜತೆಗೆ ತಿರುಮಲ, ಸೀತಾರಾಮಯ್ಯಂಗಾರ್ ಕೂಡಿಕೊಂಡರು. ಒಂದು ಶುಭ ದಿನ ನೋಡಿ 'ಕಿಲಾರಿ ರೋಡಿ'ನಲ್ಲಿ ವಿಶಾಲವಾದ ಒಂದು ಕೋಣೆಯನ್ನು ಬಾಡಿಗೆಗೆ ಹಿಡಿದು 'ಫ್ರೆಂಡ್ಸ್ ಯೂನಿಯನ್' ಸಂಘವನ್ನು ಹುಟ್ಟಿಹಾಕಿದರು. ಇಂಗ್ಲಿಷ್ ಮತ್ತು ಕನ್ನಡ ನಾಟಕಗಳನ್ನಾಡಬೇಕೆಂದು ನಿರ್ಧರಿಸಿದರು. ರಾಜನೂ ತನ್ನ ಗೆಳೆಯರನ್ನು ಸಂತೋಷವಾಗಿ ಕೂಡಿಕೊಂಡ. ಹೇಗೂ ಕಾಲೇಜಿನಲ್ಲಿ ಬಸಪ್ಪ ಶಾಸ್ತ್ರಿಗಳವರ "ಶಾಕುಂತಲ" ನಾಟಕವನ್ನು ಅಭ್ಯಾಸಿಸುತ್ತಿದ್ದರು. ಅದನ್ನೇ ಪ್ರದರ್ಶನಕ್ಕೆ ತೆಗೆದುಕೊಳ್ಳುವುದೆಂದು ನಿಶ್ಚಯವಾಯಿತು.

ಆದರೆ ಈ ಕೆಲಸ ಅವರು ಭಾವಿಸಿದಷ್ಟು ಸುಲಭವಾಗಿರಲಿಲ್ಲ. ನಾಟಕವೆಂದರೆ ಜನ ಮೂಗುಮುರಿಯುತ್ತಿತ್ತು. ನಾಟಕವನ್ನು ನೋಡುವುದೇ ಮರ್ಯಾದೆಗೆ ಕಡಿಮೆ ಎಂಬ ಭಾವನೆಯು ಬೇರೂರಿತ್ತು. ಇನ್ನು ನಾಟಕದಲ್ಲಿ ಪಾತ್ರ ವಹಿಸುವುದೆಂದರೆ ಸಮಾಜದ ದೃಷ್ಟಿಯಲ್ಲಿ ತೀರ ಅಕ್ಷಮ್ಯವಾದ ಅಪರಾಧವಾಗಿತ್ತು. ಯೂನಿಯನ್ನಿನ ಖರ್ಚು ವೆಚ್ಚಗಳನ್ನು ವಹಿಸುತ್ತೇನೆಂದು ರುದ್ರಣ್ಣ ಮುಂದೆ ಬಂದಿದ್ದ. ಇದು ಹೇಗೋ ಅವನ

ಮನೆಯವರಿಗೆ ತಿಳಿದು ರಾದ್ಧಾಂತವಾಗಿ ಹೋಯಿತು. ಅವನು ಯೂನಿಯನ್ ಪ್ರಯತ್ನಕ್ಕೆ ಸಹಾಯ ಮಾಡುವುದು ಹಾಗಿರಲಿ ಅದರ ಸದಸ್ಯರ ಜತೆ ಸೇರುವುದು ಕೂಡ ಬಹಳ ಕಷ್ಟಕ್ಕೆ ಬಂತು. "ಹೇಗಾದರೂ ಆಗಲಿ. ಕೈಗೆ ತೆಗೆದುಕೊಂಡಿರುವ ಕೆಲಸವನ್ನು ಕೊನೆಗಾಣಿಸಿಯೇ ಬಿಡಬೇಕು. ಸಾಲಸೋಲವಾದರೂ ಚಿಂತೆಯಿಲ್ಲ." ಎಂದು ರಾಜ ಎಲ್ಲರನ್ನೂ ಹುರಿದುಂಬಿಸಿದ. ರಾಜ ದುಷ್ಯಂತನ ಪಾತ್ರವನ್ನೂ, ಅಚ್ಯುತ ಶಾಕುಂತಲೆಯ ಪಾತ್ರವನ್ನೂ, ದೇವದಾಸ್ ಕಣ್ವರ ಪಾತ್ರವನ್ನೂ ಅಭಿನಯಿಸುವುದೆಂದು ನಿಷ್ಕರ್ಷೆಯಾಗಿ ಅಭ್ಯಾಸವಾರಂಭವಾಯಿತು.

ನಾಟಕ ಕಂಪೆನಿಗಳ ಸ್ಥಿತಿಗೂ ಜನಾಭಿಪ್ರಾಯಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲ. ನಾಟಕದ ಕಂಪೆನಿಯೆಂದರೆ ಕೊಳೆಯ ಕೂಪವೇ ಆಗಿತ್ತು. ವಿದ್ಯಾಸಂಸ್ಕೃತಿಗಳ ಗಂಧವಿಲ್ಲದ ಮಾಲೀಕರು ನಟರ ಕೈಗೆ ಸಿಕ್ಕಿ ಕಲೆ ಕೊರಗುತ್ತಿತ್ತು. ಕಂಪೆನಿಗಳ ನಟರು ಡೇರಾ ಹೊಡೆಯುವುದರಿಂದ ಮೊದಲುಗೊಂಡು ಪಾತ್ರವನ್ನು ಅಭಿನಯಿಸುವುದರವರೆಗೆ ಎಲ್ಲಾ ಕೆಲಸವನ್ನೂ ಮಾಡಬೇಕಾಗುತ್ತಿತ್ತು. ಸ್ವಲ್ಪ ಉತ್ತಮ ಸ್ಥಿತಿಯಲ್ಲಿದ್ದ ಕಂಪನಿಯವರು ಕೆಲವು ಪ್ರಕಟನ ಪತ್ರಿಕೆಗಳನ್ನು ಅಚ್ಚುಹಾಕಿಸಿ ತರಿಸುತ್ತಿದ್ದರು. ಸ್ಥಳ ಕಾಲವನ್ನು ಬದಲಾಯಿಸಿ ಅವುಗಳನ್ನು ಹೋದ ಹೋದೆಡೆಯಲ್ಲಿ ಉಪಯೋಗಿಸುತ್ತಿದ್ದರು. ಕಂಪೆನಿ ಒಂದೂರಿಗೆ ಹೋಗುವ ಮುನ್ನ ನಟರು ಅಲ್ಲಿಗೆ ಹೋಗಬೇಕು. ಹತ್ತು ಜನ ಸೇರಿದ ಕಡೆ ಅವರು ಪ್ರಕಟಣೆಯನ್ನೋದಬೇಕು ಅಥವಾ ಅವರ ಪೈಕಿ ಒಬ್ಬರ ಕೈಗೆ ಅದನ್ನು ಕೊಟ್ಟು ಓದಿಸಬೇಕು. ಓದಿದಾನಂತರ ಅದನ್ನು ಹಿಂದಕ್ಕೆ ತೆಗೆದುಕೊಂಡು ಬರಬೇಕು. ಅವುಗಳಲ್ಲಿ ಒಂದೆರಡು ಕಡಿಮೆಯಾದರೂ ನಟ, ಸಾಹುಕಾರರ ಉಗ್ರ ಕೋಪಕ್ಕೆ . ಗುರಿಯಾಗಬೇಕಾಗಿತ್ತು.

ಕಂಪನಿಗಳು ನಾಯಿ ಕೊಡೆಯಂತೆ ತಲೆಯೆತ್ತಿಕೊಂಡಿದ್ದುವು. ಯಾವನೊ ಸಾಹುಕಾರ, ಅವನಿಗೊಬ್ಬಳು ಪ್ರೇಯಸಿ. ಅವಳ ಸಲುವಾಗಿ ಕಂಪೆನಿ ಆರಂಭವಾಗಿಬಿಡುತ್ತಿತ್ತು. ಇಂತಹ ಕಂಪೆನಿಗಳ ಯೋಗ್ಯತೆಯನ್ನು ಜನ ಅಳೆಯುತ್ತಿದ್ದುದು ಅವರ ಹತ್ತಿರ ಎಷ್ಟು ಫರದೆಗಳಿವೆಯೆಂಬುದರ

ಮೇಲೆ. ಕಂಪೆನಿಯವರೇ ಪ್ರಕಟನೆಗಳಲ್ಲಿ "ನಮ್ಮ ಹತ್ತಿರ ನಾಲ್ಕು ಫರದೆಗಳಿವೆ– ಆರು ಫರದೆಗಳಿವೆ" ಎಂದು ಡಂಗುರ ಸಾರುತ್ತಿದ್ದರು.

ಸಾಮಾನ್ಯವಾಗಿ ಕಂಪೆನಿಗಳು ಹಳ್ಳಿಪಳ್ಳಿ, ಜಾತ್ರೆಗಳನ್ನು ಬಿಟ್ಟು ಬರುತ್ತಿರಲಿಲ್ಲ. ಸಭಾಮಂದಿರದಲ್ಲಿ ನೆಲ, ಬೆಂಚು ಎರಡೇ ತರಗತಿಗಳಿರುತ್ತಿದ್ದುವು. ಯಾರಾದರೂ ದೊಡ್ಡ ಮನುಷ್ಯರು ನಾಟಕಕ್ಕೆ ಬರುವದಿದ್ದರೆ ತಮ್ಮ ಕುರ್ಚಿಗಳನ್ನು ತಾವೇ ಹೊರೆಸಿಕೊಂಡು ಬರುತ್ತಿದ್ದುದು ವಾಡಿಕೆ. ಸೀಮೆಎಣ್ಣೆ ದೀಪಗಳ ಉಪಯೋಗವೇ ಹೆಚ್ಚು. ಕೆಲವು ಕಂಪೆನಿಗಳಲ್ಲಿ ಗ್ಯಾಸ್‌ಲೈಟನ್ನೂ ಉಪಯೋಗಿಸುತ್ತಿದ್ದರು. ರಾಜಾನಕುಂಟೆ ಬುಳ್ಳಪ್ಪನ ಕಂಪೆನಿ ಬಹಳ ಹೆಸರುವಾಸಿಯಾಗಿತ್ತು. ಅಲ್ಲಿ ಮಾತ್ರ ಡೈನಮೋ ಇಟ್ಟುಕೊಂಡು ದೀಪಹಚ್ಚುತ್ತಿದ್ದರು.

ನಾಟಕಗಳಿಗೆಲ್ಲಾ ಒಂದೇ ಮಾದರಿಯ ಪರದೆಗಳು, ಒಂದೇ ಮಾದರಿಯ ಉಡುಪುಗಳು. ರಾಜ, ಸೇವಕ; ರಾಣಿ, ದೂತಿ ಇವರಿಗೆ ವ್ಯತ್ಯಾಸವೇ ಕಂಡು ಬರುತ್ತಿರಲಿಲ್ಲ, ಅನೇಕ ಸಲ ರಾಜನಿಗಿಂತ ಅವನ ಸೇವಕ ಉತ್ತಮ ಉಡುಪನ್ನು ಧರಿಸುತ್ತಿದ್ದುದೂ ಉಂಟು.

ಹತ್ತು ಗಂಟೆಗೆಂದು ಪ್ರಕಟಿಸಲ್ಪಟ್ಟಿದ್ದರೂ ಹನ್ನೆರಡು ಗಂಟೆಗೆ ಮುಂಚೆ ನಾಟಕವಾರಂಭವಾಗುತ್ತಿದ್ದುದೇ ವಿರಳ. ಸೂತ್ರಧಾರ ನಟ ಪ್ರತಿ ನಾಟಕದಲ್ಲಿಯೂ ಬರಲೇಬೇಕು. ರಾಜ, ಮಂತ್ರಿ, ಸೇನಾಪತಿಗಳ ದರ್ಬಾರು ಅದರಲ್ಲಿ ಒಂದು ಫಾರ್ಸಿ ಡ್ಯಾನ್ಸು ಅವಶ್ಯಕವಾಗಿ ಇರಬೇಕಾದ ಒಂದು ಅಂಗ. ನಾಯಕ ವತ್ಸರಾಜನಾಗಲೀ, ಹರಿಶ್ಚಂದ್ರನಾಗಲೀ ಕಿನ್‌ಕಾಪಿನ ಸೂಟ್ ಹಾಕಿಕೊಂಡು, ಕಣ್ಣಿಗೆ ಕನ್ನಡಕ ಹಾಕಿಕೊಂಡು, ಕೈಯಲ್ಲಿ ರೇಷ್ಮೆವಸ್ತ್ರವನ್ನು ಹಿಡಿದು ಬರುತ್ತಿದ್ದ. ಅವನ ಹಿಂದೆ ನೇಪಥ್ಯದ ಎರಡು ಕಡೆ ಇಬ್ಬರು ಪಿಟೀಲ್‌ವಾದ್ಯಗಾರರು ನಿಂತು ಕುಯ್ಯುತ್ತಿದ್ದರು. ನಾಯಕ ಆರಂಭಿಸಿದ ಹಾಡು ಪ್ರೇಕ್ಷಕರಿಗೆ ರುಚಿಸದೆ ಹೋದರೆ ಅವರು ತಮಗೆ ಬೇಕಾದ ಹಾಡನ್ನು ಸೂಚಿಸುತ್ತಿದ್ದರು. ಅವನು ಪ್ರೇಕ್ಷಕರು ಬೇಕೆಂದ ಹಾಡನ್ನೇ ರಾಗತಾಳಯುಕ್ತವಾಗಿ ಹಾಡುತ್ತಿದ್ದ. ರಂಗದ ಮೇಲಿದ್ದ ನಟರಿಗೂ ಪ್ರೇಕ್ಷಕರಿಗೂ ಧಾರಾಳವಾಗಿ ಸಂಭಾಷಣೆ ನಡೆಯುತ್ತಿತ್ತು. ಉತ್ತರ ಪ್ರತ್ಯುತ್ತರಗಳು ಒಂದೊಂದು ಸಲ ವಿರಸಕ್ಕೆ ಮುಟ್ಟಿ ಪೋಲೀಸಿನವರು ಬಂದು ಶಿಸ್ತನ್ನು ತರ

ಬೇಕಾಗುತ್ತಿತ್ತು. ಪ್ರೇಕ್ಷಕರು ತಮ್ಮ ಮೆಚ್ಚುಗೆಯನ್ನು ಕಲ್ಲು, ಬೀಡಿಕಟ್ಟು, ಕೊಳೆತ ಆಲೂಗೆಡ್ಡೆಗಳ ಮೂಲಕ ವ್ಯಕ್ತಪಡಿಸುತ್ತಿದ್ದರು.

ನಟರ ನೈತಿಕಜೀವನ ಮುಗಿಲ ಮಟ್ಟಕ್ಕೆ ಏರಿತ್ತು. ಹೆಂಡ, ಹಸಿ ಮಾಂಸ ನೇಪಥ್ಯದಲ್ಲಿ ಇದ್ದ ಹೊರತೂ ಕೆಲವು ನಟರಿಗೆ ಸ್ಫೂರ್ತಿಯೇ ಬರುತ್ತಿರಲಿಲ್ಲ. ನೇಪಥ್ಯ, ಬಣ್ಣದ ಕೋಣೆಗಳು ಕೀಳು ದರ್ಜೆಯ ವೇಶ್ಯಾವಾಟವನ್ನು ಮೀರಿಸಿದ್ದವು.

ಈ ಕಂಪೆನಿಗಳು ಆಡುತ್ತಿದ್ದುದು ಪಾಂಡವ ವಿಜಯ, ಚೋರಕಥೆ, ಸದಾರಮೆ, ಗುಲೇಬಕಾವಲಿ, ಕೃಷ್ಣಲೀಲೆ, ವಸಂತಮಿತ್ರವಿಜಯ, ಮದನಭಂಗ ಮೊದಲಾದ ನಾಟಕಗಳು. ಹೊಲಸು ಮಾತುಗಳು, ಕುಚೇಷ್ಟೆಯ ನಗೆ ಇವೇ ನಾಟಕಸಾಹಿತ್ಯದ ಜೀವಜೀವಾಳವಾಗಿದ್ದವು.

ರಾಜ ಬೇಸರವಿಲ್ಲದೆ ಇಂತಹ ನಾಟಕಗಳನ್ನೂ ನೋಡುತ್ತಿದ್ದ. ಯೂರೋಪಿನಲ್ಲಿ ರಂಗಭೂಮಿಗೆ ಇದ್ದ ಸ್ಥಾನವನ್ನು ನೆನಸಿಕೊಂಡು ಅವನ ಮನಸ್ಸು ಖಿನ್ನವಾಗುತ್ತಿತ್ತು. ಅಲ್ಲಿ ನಟನೆಂದರೆ ಕಲಾವಿಭೂತಿ. ಅವನನ್ನು ಸನ್ಮಾನಿಸಲು ಚಕ್ರವರ್ತಿ, ಚಕ್ರವರ್ತಿನಿಯರು ರಂಗಭೂಮಿಗೆ ಬರುತ್ತಿದ್ದರು. ಇಲ್ಲಿ ನಟನೆಂದರೆ ಕೀಳುವೃತ್ತಿಯ ಹೇಸಿಗೆಯ ಪ್ರಾಣಿ. ಇವನನ್ನು ನೋಡಲು ಶೀಲವಂತರು ಅಂಜುತ್ತಿದ್ದರು.

ನಾಟಕದ ವಾತಾವರಣ ಇಷ್ಟು ಹೊಲಸಾಗಿದ್ದರೂ ಇದು ಭವ್ಯವಾದ ಕಲೆ. ಮನುಷ್ಯ ತನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬಹುದು. ನಾಟಕದಿಂದ ದೇಶದ ಉದ್ಧಾರವಾಗುತ್ತದೆ ಎಂಬ ಘನತತ್ವ ರಾಜನ ಮನಸ್ಸಿನಲ್ಲಿ ಬೇರೂರಿಬಿಟ್ಟಿತ್ತು. ಎಷ್ಟೇ ಕಷ್ಟನಷ್ಟ ಬಂದರೂ 'ಫ್ರೆಂಡ್ಸ್ ಯೂನಿಯನ್ನ'ನ್ನು ಮುಂದಕ್ಕೆ ತಂದು ಉತ್ತಮ ತರಗತಿಯ ನಾಟಕಗಳನ್ನು ಪ್ರದರ್ಶಿಸಬೇಕೆಂದು ಅವನ ಮನಸ್ಸು ಹಾತೊರೆಯುತ್ತಿತ್ತು. ಪ್ರಿನ್ಸಿಪಾಲರು ಹೇಳಿದ ಹುರುಪಿನ ಮಾತುಗಳು ಅವನ ಕಿವಿಗಳಲ್ಲಿ ಝೇಂಕಾರ ಮಾಡುತ್ತಿದ್ದವು. ಈ ವಿಗಡ ಪರಿಸ್ಥಿತಿಯನ್ನು ಸುಧಾರಿಸುವ ಕರ್ತವ್ಯ ತನ್ನ ಪಾಲಿಗೆ ಬಂದಿದೆಯೆಂದು ರಾಜ ನಂಬಿದ್ದನು.

ರಾಜನ ಮನಸ್ಸಿನಲ್ಲಿ ಬೀಜರೂಪವಾಗಿದ್ದ ಭಾವನೆ ಮೊಳೆತು, ಚಿಗುರಿ, ಫಲಿಸಲು ಅನಿರೀಕ್ಷಿತವಾಗಿ ಇಂಬು ದೊರಕಿತು. ಇಂಗ್ಲೆಂಡಿನ ಪ್ರಸಿದ್ಧ ನಟ

ನಾದ ಆಲೆನ್ ಕ್ವಾರ್ಟರ್‌ಮೇನ್ ತನ್ನ ಪರಿವಾರದೊಂದಿಗೆ ಬಂದು ಕಂಟೋನ್ಮೆಂಟಿನಲ್ಲಿ ಕೆಲವು ಷೇಕ್ಸ್‌ಪಿಯರ್ ನಾಟಕಗಳನ್ನು ಆಡುತ್ತಾನೆಂದು ಸುದ್ದಿ ಬಂದಿತ್ತು. ರಾಜನ ಕುತೂಹಲ ಹೇಳ ತೀರದು. ಆಲೆನ್ನನ ಬರುವನ್ನು ಅತ್ಯಂತ ಆತುರದಿಂದ ನಿರೀಕ್ಷಿಸಹತ್ತಿದನು.

ಆಲೆನ್ ಕ್ವಾರ್ಟರ್‌ಮೇನ್ ಷೇಕ್ಸ್‌ಪಿಯರ್ ನಾಟಕಗಳನ್ನು ಅಭಿನಯಿಸುವುದರಲ್ಲಿ ಬಹಳ ಪ್ರಸಿದ್ಧಿ ಪಡೆದಿದ್ದನು. ಅವನ ಹ್ಯಾಂಮ್ಲೆಟ್, ಲಿಯರ್, ಷೈಲಾಕ್, ರೋಮಿಯೋ, ಅಥೇಲೋ ಪಾತ್ರಗಳು ಜಗದ್ವಿಖ್ಯಾತವಾಗಿದ್ದವು. ತನ್ನ ಮಂಡಳಿಯೊಡನೆ ಇಡೀ ವಿಶ್ವಪರ್ಯಟನ ಮಾಡಿ ಹಿಂದೂಸ್ಥಾನದ ದೊಡ್ಡ ದೊಡ್ಡ ಊರುಗಳಲ್ಲಿ ಪ್ರದರ್ಶಿಸಿ ಬೆಂಗಳೂರಿಗೆ ಬಂದಿದ್ದನು.

ಮೊದಲನೆಯ ನಾಟಕ "ಮರ್ಚಂಟ್ ಆಫ್ ವೆನಿಸ್". ನಾಟಕಶಾಲೆಗೆ ಎರಡು ಗಂಟೆ ಮುಂಚೆ ಹೋದರೂ ರಾಜನಿಗೆ ಟಿಕೆಟ್ ಸಿಕ್ಕಲಿಲ್ಲ. ಒಮ್ಮೆಲೇ ಆಕಾಶವೇ ಕುಸಿದುಬಿದ್ದಷ್ಟು ನಿರಾಶೆಯಾಯಿತು. ಮಾರನೆಯ ದಿವಸದ ನಾಟಕದ ಟಿಕೇಟನ್ನು ಮೊದಲೇ ಕೊಂಡು ಮನೆಗೆ ಬಂದ. ಆಲೆನ್ನನ ಮೂರು ನಾಲ್ಕು ನಾಟಕಗಳನ್ನು ನೋಡಿದ ಮೇಲೆ ರಾಜನ ಜೀವನದಲ್ಲಿ ದೊಡ್ಡ ಕ್ರಾಂತಿಯಾಗಿಬಿಟ್ಟಿತು. ತನ್ನ ಭವಿಷ್ಯ ಇರುವುದು ರಂಗಭೂಮಿಯಲ್ಲಿಯೇ ಎಂದು ನಿರ್ಧಾರವಾದಂತಾಯಿತು. ಹೇಗಾದರೂ ಮಾಡಿ ಆಲೆನ್ನನ ಭೆಟ್ಟಿಯಾಗಿ ಅವನ ಮುಂದೆ ತನ್ನ ರೋಮಿಯೋ ಪ್ರದರ್ಶಿಸಿ, ಅಭಿಪ್ರಾಯ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದನು. ಮ್ಯಾನೇಜರನ್ನು ಎಡೆಬಿಡದೆ ಆಶ್ರಯಿಸಿ, ಅವನ ಛೀತ್ಕಾರಗಳನ್ನು ಗಮನಿಸದೆ ಆಲೆನ್ನನ ಭೆಟ್ಟಿಯನ್ನು ಸಂಪಾದಿಸಿದನು. ಶನಿವಾರ ಮಧ್ಯಾಹ್ನ ಒಂದು ಗಂಟೆಗೆ ಕಬ್ಬನ್ ಹೋಟೆಲಿಗೆ ಬರಬೇಕೆಂದು ನಿರೂಪ ಬಂತು.

ಆಲೆನ್, ಅವನ ಮ್ಯಾನೇಜರು ವರ್ಣಿಸಿದ ಮನುಷ್ಯನಾಗಿರಲಿಲ್ಲ. ತೀರಾ ಸರಳ ಸ್ವಭಾವ. ರಾಜ ಹೋಗುತ್ತಲೂ ಮೊದಲು ಚಹಾ ತರಿಸಿ ಲೋಕಾಭಿರಾಮವಾಗಿ ಮಾತು ಆರಂಭಿಸಿದನು. ಮಾತಿನ ಲಹರಿಯಲ್ಲಿ ರಾಜನ ನಾಟಕಪ್ರಿಯತೆ, ಕಾಲೇಜಿನಲ್ಲಿ ಅವನು ಅಭಿನಯಿಸಿದ ಚರಿತ್ರೆ,

ಗಳನ್ನರಿತುಕೊಂಡನು. ನಗುನಗುತ್ತಾ ಮೃದುವಾಗಿ "ನಿಮ್ಮ ರೋಮಿಯೋ ನಾನು ನೋಡಬಹುದೇ ?" ಎಂದು ಕೇಳಿದನು.

ಅವನ ಮಾತಿನಲ್ಲಿ ವ್ಯಂಗ್ಯವಿರಲಿಲ್ಲ. ಆದರೂ ರಾಜನನ್ನು ಅಧೀರನನ್ನಾಗಿ ಮಾಡುವಷ್ಟು ವಿನಯ ಸೌಜನ್ಯವಿತ್ತು. ರಾಜ ಬಂದಿದ್ದುದೂ ತನ್ನ ಅಭಿನಯವನ್ನು ಆಲೆನ್ನಿಗೆ ತೋರಿಸುವುದಕ್ಕೆ—ಆದರೆ ಅವನೇ ಕೇಳಿದಾಗ ರಾಜನ ಜಂಘಾಬಲವೇ ಉಡುಗಿ ಹೋದಂತಾಯಿತು.

"ನಾನು ಅನನುಭವಿ—ಕಾಲೇಜು ಹುಡುಗ—ನೀವು ಪ್ರತಿಭಾಶಾಲಿಗಳು. ನಿಮ್ಮ ಮುಂದೆ ನನ್ನ ಹರಕು ಮುರುಕು ಅಭಿನಯ ತೋರಿಸುವುದಕ್ಕೆ ಭಯವಾಗುತ್ತದೆ."

"ಭಯ ನಮ್ಮ ಕಲೆಗೆ ಪರಮ ಶತ್ರು. ಬಂದುದನ್ನು ಧೈರ್ಯವಾಗಿ ಪ್ರದರ್ಶಿಸಬೇಕು. ಚಿಂತೆಯಿಲ್ಲ, ನಿಮಗೆ ಬಂದ ಹಾಗೆ ಮಾಡಿ."

ರಾಜ ಅಂಜುತ್ತ ಅಂಜುತ್ತಲೇ ನಿಂತ.

"ರೋಮಿಯೋ ಮಾಡುವಿರಾ ?"

"ಹೂಂ. ಯಾರಾದರೂ ಎದುರು ಪಾತ್ರದ ಮಾತುಗಳನ್ನು ಹೇಳಬೇಕು."

"ಓಹೊ, ಯಾಕಾಗಬಾರದು. ನಮ್ಮ ನಾಯಕಿ ಮಿಸ್. ಆಷ್‌ಕ್ರಾಫ್ಟ್ ಹೇಳುತ್ತಾಳೆ."

ರಾಜನಿಗೆ ಹೇಳಲಾಗದಷ್ಟು ಹಿಗ್ಗು. ಬೆಳದಿಂಗಳಿನ ರಾತ್ರಿನ ದೃಶ್ಯವನ್ನೇ ತೆಗೆದುಕೊಂಡ. ಆಲೆನ್ ಅವನ ಅಭಿನಯವನ್ನು ಎವೆಯಿಕ್ಕದೆ ನೋಡಿದ. ಅದು ಮುಗಿಯಲು "ಷೇಕ್ಸ್‌ಪಿಯರಿನ ಮತ್ತಾವುದಾದರೂ ಭಾಗ ಬರುತ್ತದೆಯೇ ?" ಎಂದು ಕೇಳಿದ.

"ಬರುತ್ತದೆ ಹ್ಯಾಂಮ್ಲೆಟ್ಟಿನ ಸ್ವಗತಗಳು—ಅಥೆಲೋನ ಕೆಲವು ಮಾತುಗಳು."

"ಮಾಡಿ ನೋಡೋಣ."

ಅವುಗಳನ್ನೂ ಅಭಿನಯಿಸಿ ತೋರಿಸಿದ. ಕೊನೆಯ ವಾಕ್ಯ ಮುಗಿಯಲು ಆಲೆನ್ ಮೊದಲುಗೊಂಡು ಎಲ್ಲರೂ ಕರತಾಡನ ಮಾಡಿದರು. ಆಲೆನ್ನನ ಕಣ್ಣುಗಳಲ್ಲಿ ಹನಿಗೂಡಿತ್ತು.

" ಕಿರಿಗೆಳೆಯಾ, ನನ್ನನ್ನು ಬಹಳ ಸುಖಿಯನ್ನಾಗಿ ಮಾಡಿರುವೆ. ನನ್ನ ಧನ್ಯವಾದಗಳು."

" ಕಿರಿಯನೆಂದು ಪ್ರೋತ್ಸಾಹಿಸುತ್ತಿರುವಿರಿ. ನಿಜವಾಗಿ ಹೇಳಿ. ರಂಗ ಭೂಮಿಯ ಮೇಲೆ ನನಗೇನಾದರೂ ಗತಿಯಿದೆಯೇ ? "

" ಉತ್ತಮ ನಟನಲ್ಲಿರಬೇಕಾದ ಎಲ್ಲಗುಣಗಳೂ ನಿಮ್ಮಲ್ಲಿವೆ. ಆದರೆ ಅನುಭವ ಬೇಕು—ಶಿಕ್ಷಣ ಬೇಕು. ಅವು ದೊರೆತರೆ ನೀವು ಉತ್ತಮ ನಟ ರಾಗುತ್ತೀರಿ. "

ರಾಜನ ಶ್ರಮ ಸಾರ್ಥಕವಾಯಿತು. ಸಂಶಯದಲ್ಲಿ ತೊಳಲಾಡುತ್ತಿದ್ದ ಅವನ ಮನಸ್ಸು ಒಂದು ನಿಲುಗಡೆಗೆ ಬಂತು. ಅಲೆನ್ ಮಾತು ಮುಂದು ವರಿಸಿ " ನೀವು ಒಂದು ದೊಡ್ಡ ಸತ್ಯವನ್ನು ನನಗಿಂದು ಬೋಧಿಸಿದಿರಿ. " ಎಂದ.

" ನಿಮಗೆ ಬೋಧಿಸುವಷ್ಟು ನನ್ನ ಯೋಗ್ಯತೆಯೇ ?"

" ಕೇಳಿ. ಷೇಕ್ಸ್‌ಪಿಯರ್ ಇಂಗ್ಲೆಂಡಿನ ಮಹಾಕವಿ ಎಂದಿದ್ದೆ. ಅವನ ಪಾತ್ರಗಳನ್ನು ಇಂಗ್ಲಿಷಿನವರು ನಾವೇ ಮಾಡಬೇಕು, ಇತರ ಕೈಯಲ್ಲಿ ಸಾಧ್ಯವಿಲ್ಲ ಎಂದಿದ್ದೆ. ನೀವು ಸಾಧ್ಯ ಎಂದು ತೋರಿಸಿದಿರಿ. ನಾವೂ ಪ್ರವೇಶಿಸಲಾಗದ ರೀತಿಯಲ್ಲಿ ಕವಿಯ ಹೃದಯವನ್ನು ಹೊಕ್ಕು ಅವನ ಮಾತುಗಳನ್ನು ಚಿತ್ತಾಕರ್ಷಕವಾಗಿ ನುಡಿದಿರಿ."

" ರಂಗಭೂಮಿಯಲ್ಲಿಯೇ ನಿಂತು, ಅದರ ಸೇವೆಮಾಡಬೇಕೆಂದು ನನ್ನಾಸೆ. ಹಾಗೆ ಮಾಡಬಹುದೇ ?"

" ನೀವು ಮಾಡದೆ ಇನ್ನು ಯಾರು ಮಾಡುವವರು ? ಕಲಾದೇವತೆ (Muse) ನಿಮ್ಮನ್ನು ಆಶ್ರಯಿಸಿದ್ದಾಳೆ—ನೀವು ಆಕೆಯನ್ನು ತಿರಸ್ಕರಿಸ ಕೂಡದು. "

" ನಿಮ್ಮ ಆಶೀರ್ವಾದ. "

" ನಾನು ಮುಂದಿನ ಸಲ ಬರುವ ಹೊತ್ತಿಗೆ ಈ ವಿದ್ಯಾರ್ಥಿ ವಿದ್ಯಾ ಗುರುವಾಗಿರಲಿ. "

" ಎಷ್ಟು ದೊಡ್ಡ ಮನಸ್ಸು ನಿಮ್ಮದು— ನಿಮ್ಮಲ್ಲಿ ಒಂದು ಭಿಕ್ಷೆ ಕೇಳಬಹುದೇ ? "

" ಸಂತೋಷವಾಗಿ. "

" ನೀವು ಅಭಿನಯಿಸುವ ಪಾತ್ರಗಳ ಕೆಲವು ಚಿತ್ರಗಳನ್ನು ದಯೆಯಿಟ್ಟು ಕೊಡುವಿರಾ. "

" ಸಂತೋಷವಾಗಿ. " ಎಂದು ತಾನೇ ಎದ್ದು ಹೋಗಿ ಚಿತ್ರಸಂಗ್ರಹ ವೊಂದನ್ನು ತಂದು, ತನ್ನ ಸಹಿಹಾಕಿ ರಾಜನಿಗಿತ್ತನು.

" ಇನ್ನೂ ನಾಲ್ಕು ನಾಟಕಗಳನ್ನಾಡುತ್ತೇನೆ. ಎಲ್ಲಾ ನಾಟಕಗಳಿಗೂ ಬನ್ನಿ. "

" ಆಗಲಿ. " ಎಂದು ಆಲೆನ್ನನಿಂದ ಬೀಳ್ಕೊಂಡು ರಾಜ ಹೊರಟ.

ರಾಜನ ಮನಸ್ಸು ವಿಚಾರದ ಸುಳುವಿನಲ್ಲಿ ಸಿಕ್ಕಿಕೊಂಡಿತು. ಆಲೆನ್ನನ ಚಿತ್ರಸಂಗ್ರಹವನ್ನು ನೋಡುತ್ತಾ ಒಂದು ಮರದ ಕೆಳಗೆ ಕುಳಿತ. ಕಣ್ಣು ಗಳು ಚಿತ್ರದ ಮೇಲೆ ಆದರೆ ನೋಟ ಬೇರೆ ಕಡೆಗೆ ಹೋಗಿತ್ತು. ಹಾಳೆಗಳು ಮಗುಚುತ್ತಿದ್ದವು ಆದರೆ ಯಾವ ಚಿತ್ರವೂ ಅವನ ಮನಸ್ಸಿನ ಮೇಲೆ ಮೂಡಲಿಲ್ಲ.

" ಕಲಾದೇವತೆ ನಿಮ್ಮನ್ನು ಆಶ್ರಯಿಸಿದ್ದಾಳೆ— ನೀವು ಆಕೆಯನ್ನು ತಿರಸ್ಕರಿಸಕೂಡದು." ಈ ಮಾತುಗಳು ಮತ್ತೆ ಮತ್ತೆ ಸಮುದ್ರದ ಅಲೆ ಯಂತೆ ಬಂದು ರಾಜನ ಹೃದಯವನ್ನಪ್ಪಳಿಸುತ್ತಿದ್ದವು. ತನ್ನ ಸ್ಥಿತಿ– ತನ್ನ ದೇಶದ ನಾಟಕದ ಸ್ಥಿತಿಗಳನ್ನು ನೆನೆದು ಮನಸ್ಸು ಮುದುಡಿತು. ಈ ಕೊಳಚೆಯ ಕೂಪದಿಂದ ನಾಟಕವನ್ನು ಮೇಲಕೆತ್ತಲಾಗುವುದೇ? ಯಾವ ರಂಗಭೂಮಿಯ ಮೇಲೆ ಶಿವ ಕುಣಿದನೋ, ರಂಗ ನಟಿಸಿದನೋ, ಮಹಾಮುನಿ ಭರತ ಸೂತ್ರಧಾರನಾಗಿದ್ದನೋ ಅದನ್ನು ಯೋಗ್ಯಸ್ಥಾನದಲ್ಲಿ ಮತ್ತೆ ಕೂಡಿಸಲಾಗುವುದೇ ? ಈ ಕೆಲಸವನ್ನು ನಿರ್ವಹಿಸಲು ನನಗೆ ತಕ್ಕ ಯೋಗ್ಯತೆಯಿದೆಯೇ ? ಆಲೆನ್ ಹೇಳಿದ ಮಾತುಗಳು ಕೇವಲ ಪ್ರೋತ್ಸಾಹಕ ನುಡಿಗಳಾಗಿರಲಿಲ್ಲ. ನಿಜವಾಗಿಯೂ ತನ್ನ ಅಭಿನಯದಿಂದ ಅವನ ಅಂತಃ ಕರಣ ಕಲಕಿತ್ತು. ಉತ್ತಮ ನಟನಲ್ಲಿರಬೇಕಾದ ಎಲ್ಲ ಗುಣಗಳೂ ಇವೆ ಎಂದು ಹೇಳಿದ್ದಾನೆ. ಆದರೆ— ಅನುಭವಬೇಕು ? ಅನುಭವ ಪಡೆಯುವುದು ಹೇಗೆ? ಗುರುವೆಂದು ಯಾರನ್ನು ಆಶ್ರಯಿಸಲಿ? ರಾಜ

ದಾರಿಗಾಣದ ಕುರುಡನಾಗಿದ್ದನು. ಚಿಂತೆಯಿಂದ ಸೋತ ಕಾಲುಗಳನ್ನೆಳೆದು ಕೊಂಡು "ಯೂನಿಯನ್" ಕಡೆಗೆ ನಡೆದ.

ರಾಜನಿಗೆ ಸಿಕ್ಕಿದ ಸ್ವಾಗತವನ್ನು ಕಂಡು ಅವನ ಗೆಳೆಯರು ಸಂತೋಷಿಸಿದರು. ಅವರ ಕಣ್ಣುಗಳಲ್ಲಿ ರಾಜ ಒಮ್ಮೆಲೇ ಒಂದಡಿ ಬೆಳೆದಂತಾಗಿತ್ತು. ಆಲಿನ್ ಕ್ವಾರ್ಟರ್‌ಮೇನಿಂದ ಮೆಚ್ಚುಗೆಯನ್ನು ಪಡೆದ ನಟ ತಮ್ಮ ಸಂಘದ ಸದಸ್ಯ– ತಮ್ಮ ಗೆಳೆಯ ಎಂದು ಅವರಿಗೆ ಹೆಮ್ಮೆಯಾಯಿತು. ಶಾಕುಂತಲ ನಾಟಕದ ಸಿದ್ಧತೆ ಹೆಚ್ಚು ಹುರುಪಿನಿಂದ ಸಾಗತೊಡಗಿತು. ಊರಿನಲ್ಲಿ ಬಾಯಿಂದ ಬಾಯಿಗೆ ಸುದ್ದಿಹೋಗಿ ಸಾಕಷ್ಟು ಪ್ರಚಾರವೂ ಸಿಕ್ಕಿತ್ತು. "ಸರಿ, ಆಗಲಿಲ್ಲ ಹೋಗಲಿಲ್ಲ" ಎಂದವರು ಕೆಲವರು; "ಮಾಡೋದಕ್ಕೆ ಕೆಲಸವಿಲ್ಲ. ನಾಟಕವಂತೆ ನಾಟಕ" ಎಂದವರು ಕೆಲವರು; "ನಾಟಕ ಸ್ಟೇಜು ಹತ್ತಿದರಲ್ಲವೇ ಮಾತು" ಎಂದವರು ಕೆಲವರು. "ಹುಡುಗರು ಹಾಳಾಗುವುದಕ್ಕೆ ಮಾರ್ಗ" ಎಂದು ಕಣ್ಣುಕೆಂಪಗೆ ಮಾಡಿಕೊಂಡವರು ಕೆಲವರು. ಮೊದಮೊದಲು ಯೂನಿಯನ್ನಿನ ಗೆಳೆಯರಿಗೆ ಈ ಸುದ್ದಿ ಟೀಕೆಗಳು ತಳಮಳವನ್ನುಂಟುಮಾಡುತ್ತಿದ್ದರೂ ಕ್ರಮಕ್ರಮೇಣ ರೂಢಿಯಾಗುತ್ತ ಬಂದು ಅವರ ಕೆಲಸ ಸುಸೂತ್ರ ಸಾಗುವುದಕ್ಕೆ ಉತ್ತೇಜನ ಕೊಟ್ಟಾಂತಾಯಿತು. "ನಾಟಕ ಮಾಡಿ ತೋರಿಸಿ ನಾವು ಏನೂ ಅನ್ನುವುದನ್ನು ಸಿದ್ಧಮಾಡಿಕೊಡುತ್ತೇವೆ" ಎಂದು ಛಲದಿಂದ ತಮ್ಮ ಅಭ್ಯಾಸವನ್ನು ಮುಂದುವರಿಸಿದರು.

೩

ನಾಟಕದ ಸುದ್ದಿ ಕೇಳಿ ವಿಸ್ಮಯಗೊಂಡವರಲ್ಲಿ ನರಸಿಂಹಾಚಾರ್ಯರೂ ಒಬ್ಬರು. ಎಲ್ಲಿಗೂ ಹೋಗದೆ ತಮ್ಮ ಮಗ 'ನಾಟಕದವನಾಗುವನಲ್ಲಾ ಎಂಬ ಭೀತಿ ಅವರನ್ನಾವರಿಸಿತು. ತಮ್ಮ ತಪ್ಪನ್ನು ಗ್ರಹಿಸಿ ಪರಿತಾಪಪಟ್ಟರು. "ಮೊದಲಿಂದಲೂ ತಾಯಿಲ್ಲದ ಮಗನೆಂದು ಬಿಟ್ಟುಕೊಂಡು ಬಂದುದು ನನ್ನ ತಪ್ಪು. ಈಗ ಹುಡುಗ ಬೆಳೆದ ಬಲಿತ. ಹೇಳಿದ ಮಾತು ಕೇಳುತ್ತಾನೆಯೋ" ಎಂದು ಚಿಂತಿಸಿದರು. ಅವರ ಚಿಂತೆಗೆ ನಾಲ್ಕುಜನ ಗುರುತಿನವರೂ, ಗೆಳೆಯರೂ ಪುಟಕೊಟ್ಟಿದ್ದರು. ಒಂದು ದಿನ ಆಚಾರ್ಯರು ಗಟ್ಟಿ ಮನಸ್ಸು

ಮಾಡಿ ಮಗನ ಹತ್ತಿರ ಮಾತು ತೆಗೆದರು. "ನಿನ್ನ ನಾಟಕ ಯಾವಾಗಪ್ಪಾ ರಾಜಾ" ಎಂದು.

ತಂದೆಗೆ ಈ ಸುದ್ದಿ ಗೊತ್ತಾಗಿದುದು ಮಗನಿಗೆ ತಿಳಿದಿರಲಿಲ್ಲ. ಒಮ್ಮೆಲೇ ಹುಟ್ಟಿದ ಪ್ರಶ್ನೆಯನ್ನು ಕಂಡು ರಾಜ ಸ್ವಲ್ಪ ಅವಾಕ್ಕಾದ.

"ನಿಮಗೆ ಯಾರು ಹೇಳಿದರು ?"

"ಊರಿಗೆ ಊರೇ ಮಾತಾಡ್ತಾ ಇದೆ. ಇನ್ನು ನನಗೆ ಗೊತ್ತಾಲ್ವೇ ಹಾಗಾದರೆ ಸುದ್ದಿ ನಿಜಾನ್ನು"

"ಹೌದು ನಿಜವೇ– ಶಾಕುಂತಲ ನಾಟಕ ತೆಗೆದುಕೊಂಡಿದ್ದೇನೆ."

"ಯಾವ ಕಂಪನಿಯವರೊ ಕಾಣೆ."

"ಕಂಪೆನಿಯವರಲ್ಲ. ನಾವೇ ನಾಲ್ಕುಜನ ಸ್ನೇಹಿತರು ಕೂಡಿ ಕೊಂಡು............"

"ಹಾಗಾದರೆ ಮುಂದೆ ಅದನ್ನೇ ಕಂಪೆನಿಮಾಡಬೇಕೂಂತಾಲೋ ಉದ್ದೇಶ."

"ಉದ್ದೇಶ ಹಾಗೇನಿಲ್ಲ. ಅವರೂ ಎಲ್ಲಾ ಕಲಾಪ್ರೇಮದ ಮೇಲೆ ಕೂಡಿರುವವರು. ನಾಟಕವನ್ನೇ ವೃತ್ತಿಮಾಡಿಕೊಳ್ಳಬೇಕೆನ್ನುವವರು ಯಾರೂ ಇಲ್ಲ."

"ಲಕ್ಷಣವಾಗಿ ಭಜನೆಗಿಜನೆ ಮಾಡಿಕೊಳ್ಳದೆ ಈ ನಾಟಕದ ಹವ್ಯಾಸ ಯಾಕಪ್ಪಾ."

"ಭಜನೆ ಮಾಡುವ ಕೆಲಸವೇ ನಾಟಕ ಮಾಡತ್ತಪ್ಪ. ಇನ್ನೂ ಚೆನ್ನಾಗಿ ಮಾಡತ್ತೆ ಅಷ್ಟೇ!"

"ಏನೋಪ್ಪ, ನಾಟಕಾಂದ್ರೆ ಪೋಲಿ ಪಟಿಂಗರ ವೃತ್ತಿ ಎಂತಾ ಹೆಸರಾಗಿ ಹೋಗಿದೆ. ನೀನು ಇದರಲ್ಲೆಲ್ಲಾ ಕೈಹಾಕೋದು ನನಗೆ ಸ್ವಲ್ಪವೂ ಇಷ್ಟ ವಿಲ್ಲ."

"ಅಯೋಗ್ಯರು ಸೇರಿಕೊಂಡು ನಾಟಕದ ಹೆಸರು ಕೆಡಿಸಿದ್ದಾರೆ. ಅದರಲ್ಲೇನಿದೆ ತಪ್ಪು. ದೊಡ್ಡ ಕಲೆ, ದೊಡ್ಡ ವಿದ್ಯೆ."

"ನಮ್ಮ ವಂಶದಲ್ಲಿ ಯಾರೂ ಈ ಮಾರ್ಗ ಹಿಡಿದಿರಲಿಲ್ಲಪ್ಪ."

"ಹೌದು. ಯಾರೂ ಸರ್ಕಾರಿ ಕೆಲಸಕ್ಕೂ ಸೇರಿರಲಿಲ್ಲ. ನೀವು ಸೇರಿ ಬೇರೆ ಮಾರ್ಗವನ್ನು ಹುಡುಕಿಕೊಳ್ಳಲಿಲ್ಲವೇ ?"

"ಅಯ್ಯೋ ಆ ಕಾಲ ಬೇರೆ ರಾಜ.

"ಕಾಲ ಏನು ಮಾಡತ್ತಪ್ಪ. ಮನುಷ್ಯ ಹೇಗೆ ಚಕ್ರ ನಡೆಸಿದರೆ ಕಾಲ ಹಾಗೆ ಬದಲಾಯಿಸತ್ತೆ."

"ವಯಸ್ಸಾದೋನು– ನಿನಗಿಂತ ಹೆಚ್ಚು ಲೋಕಾನುಭವ ಪಡೆದವನು– ಕಾಲೇಜಿಗೆ ಮಣ್ಣು ಹೊರೆಲಿಲ್ಲ ನಿಜ— ಹೆಚ್ಚು ನುರಿತವನು ಹೇಳಿದ ಮಾತೂಂತ ಸ್ವಲ್ಪ ಯೋಚನೆಮಾಡಿನೋಡು— ನಿನಗೆ ದೇವರು ಹೇಗೆ ಬುದ್ಧಿ ಕೊಡುತ್ತಾನೆಯೋ ಹಾಗೆ ಮಾಡು" ಎಂದು ಕೈಯಲ್ಲಿ ವೀಳೆಯ ದೆಲೆಯನ್ನು ಹಿಡಿದು ಆಚಾರ್ಯರು ಹೊರಟುಬಿಟ್ಟರು.

ತಂದೆಯ ಮಾತನ್ನು ಕೇಳಿ ರಾಜನಿಗೆ ಕೋಪಬರಲಿಲ್ಲ. ಹುಚ್ಚು ಹುರುಪಿನಲ್ಲಿ ಹೊರಟಿದ್ದವನಿಗೆ ಎಚ್ಚರಕೊಟ್ಟಂತಾಗಿತ್ತು. ತಂದೆಯ ಮಾತನ್ನು ಒಪ್ಪಿಕೊಳ್ಳುವುದಕ್ಕೆ ಅವನು ಸಿದ್ಧನಾಗಿರಲಿಲ್ಲ. ಆದರೆ ಅದನ್ನು ಗಣನೆಗೆ ತೆಗೆದುಕೊಳ್ಳದೆ ತಿರಸ್ಕರಿಸುವುದಕ್ಕೂ ಸಿದ್ಧನಾಗಿರಲಿಲ್ಲ

"ಸೀತಾ ಇಲ್ಲಿ ಬಾ" ಎಂದು ಹೆಂಡತಿಯನ್ನು ಕರೆದ. ದೇವರಿಗೆ ತುಪ್ಪದ ದೀಪ ಹಚ್ಚುತ್ತಿದ್ದ ಸೀತಮ್ಮ ಬಂದು ಎದುರಿಗೆ ನಿಂತಳು.

"ಅಣ್ಣ ಹೇಳಿದ ಮಾತು ಕೇಳಿದೆಯಾ ?"

"ಕೇಳಿದೆ."

"ನೀನೇನು ಹೇಳುತ್ತೀ ?"

"ನನಗೇನು ತಿಳಿಯುತ್ತೆ,"

"ನಾಟಕ ಸೇರಿದರೆ ನಾನು ಕೆಟ್ಟುಹೋಗುತ್ತೇನೆ ಅನಿಸುತ್ತದೆಯೆ ?"

"ಕೆಡುವವರು ನಾಟಕ ಸೇರಿಯೇ ಕೆಡಬೇಕೇ. ಹಾಗೇ ಕೆಡುವುದಕ್ಕಾಗುವುದಿಲ್ಲವೇ ?"

"ಸರಿಯಾಗಿ ಹೇಳಿದೆ."

"ಆದರೆ, ಈ ನಾಟಕದ ಹುಚ್ಚು ನಿಮಗೆ ಹೇಗೆ ಹಿಡಿಯಿತೂಂದ್ರೆ"

"ಇದು ಹಿಡಿದ ಹುಚ್ಚಲ್ಲ ಸೀತಾ, ಒಳಗಿನಿಂದ ಹುಟ್ಟಿಕೊಂಡ ಹುಚ್ಚು

ಕೆಲವರಿಗೆ ಸನ್ಯಾಸಿಗಳಾಗಿ ಹೋಗಿಬಿಡಬೇಕೆಂಬ ಹುಚ್ಚು ಹಿಡಿಯುತ್ತದಲ್ಲಾ ಹಾಗೆ. "

" ಹಾಗಾದರೆ ಕಾಲೇಜು ಬಿಟ್ಟು ನಾಟಕಾನೇ ಮಾಡಬೇಕೂಂತೀರಾ. "

" ಆ ಕಾಲ ಬಂದರೆ ಹಾಗೂ ಮಾಡುತ್ತೇನೆ. ದೊಡ್ಡ ಸಂಸಾರ, ತುಂಬ ಹೆಣ್ಣುಮಕ್ಕಳು, ಚಿಕ್ಕಪುಟ್ಟಾ ಹುಡುಗರು ಎಲ್ಲರನ್ನೂ ಮನೆಯ ಹಿರಿಮಗನ ಕೈಲಿಟ್ಟು ಇವರನ್ನು ಮುಂದಕ್ಕೆತರುವ ಭಾರ ನಿನ್ನದು ಎಂದು ಜವಾಬ್ದಾರಿ ಹೊರಿಸಿದ ಹಾಗಾಗಿದೆ ನನಗೆ. "

" ಹಾಗೆಂದರೆ "

" ನಮ್ಮ ನಾಟಕದ ಪರಿಸ್ಥಿತಿ ನೋಡು. ಕಲೆ ಮಕ್ಕಳಾಟವಾಗಿದೆ. ಪುಂಡು ಪೋಕರಿಗಳ ಕೈಗೆ ಸಿಕ್ಕಿ ಕೊರಗುತ್ತಿದೆ. ಇದನ್ನು ಸರಿಮಾಡುವ ಜವಾಬ್ದಾರಿ ನನ್ನದಾಗಿದೆ. "

" ಯಾರು ಹೇಳಿದರು ಹಾಗೆ. "

" ಯಾರೇನು ಹೇಳುವುದು. ನನ್ನ ಅಂತರಾತ್ಮ ಹೇಳುತ್ತಿದೆ. ನಿಜವಾಗಿ ಹೇಳು ಸೀತಾ, ನಾನು ನಾಟಕದವನು ಅನಿಸಿಕೊಂಡರೆ ನಿನಗೆ ಅವಮಾನವೇ ? "

" ಏನು ಇಂತಹ ಮಾತು ಕೇಳುತ್ತೀರಿ. ನೀವು ಏನು ಮಾಡಿದರೂ ಹೇಗಿದ್ದರೂ ನನಗದೇ ಸ್ವರ್ಗ. "

ಹೆಂಡತಿಯ ಮಾತುಗಳು ರಾಜನ ಹೃದಯಕ್ಕೆ ಶಾಂತಿಯನ್ನು ನೀಡಿದವು.

ಮಾರನೆಯ ದಿವಸ ರಾಜ ಯೂನಿಯನ್ನಿಗೆ ಹೋದಾಗ ಅಲ್ಲಿನ ವಾತಾವರಣ ಕೊಂಚ ವಿಚಲವಾಗಿತ್ತು. ಸೀತಾರಾಮಯ್ಯಂಗಾರ್ ಒಂದು ಸುದ್ದಿಯನ್ನು ಹೇಳಿ ಎಲ್ಲರನ್ನೂ ಯೋಚನಾಪರವಶರನ್ನಾಗಿ ಮಾಡಿದ್ದ. ರಾಜ ಹೋಗುತ್ತಲೂ ಅವನ ಕೈಗೆ ಅಚ್ಚಾದ ಒಂದು ನಾಟಕದ ಚೀಟಿಯನ್ನು ಅಯ್ಯಂಗಾರ್ ಇತ್ತ. ಮೈಸೂರಿನಲ್ಲಿ ಅರಮನೆಯ ಸಂಗೀತ ವಿದ್ವಾಂಸರು ಸೇರಿಕೊಂಡು ಬಂದು ನಾಟಕದ ಕಂಪೆನಿ ತೆಗೆಯುವುದಾಗಿ ಸುದ್ದಿಯಿತ್ತು. ಅವರ ಮೊದನೆಯ ನಾಟಕ ಬಸಪ್ಪಶಾಸ್ತ್ರಿಗಳವರಿಂದ ವಿರಚಿತವಾದ "ಶಾಕುಂತಲ."

"ಇದಕ್ಕೆ ಇಷ್ಟು ಯೋಚನೆಮಾಡುತ್ತ ಕುಳಿತಿರಾ" ಎಂದು ರಾಜ ಕೇಳಿದ,

"ಯೋಚನೆ ಮಾಡಬೇಡವೇ? ಬಿಡಾರದ ಕೃಷ್ಣಪ್ಪನವರು, ರಾಚಪ್ಪ, ಲಕ್ಷ್ಮೀಪತಿಶಾಸ್ತ್ರಿ ಮೊದಲಾದವರು ಪಾರ್ಟಿ ಮಾಡುವಾಗ ನಮ್ಮ ನಾಟಕ ಯಾರು ಕೇಳಬೇಕು."

"ಅವರ ಅದೃಷ್ಟ ಅವರದು, ನಮ್ಮ ಅದೃಷ್ಟ ನಮ್ಮದು."

"ಅದೃಷ್ಟದ ಪ್ರಶ್ನೆಯಲ್ಲ ರಾಜಾ, ಸಂಗೀತಕ್ಕೇನು ಮಾಡೋಣ" ಎಂದು ತಿರುಮಲ ಕೇಳಿದ

"ಹೌದು, ನಮ್ಮಲ್ಲಿ ಸಂಗೀತಶೂನ್ಯ. ಸಂಗೀತವಿಲ್ಲದಿದ್ದರೆ ನಮ್ಮ ನಾಟಕ ಯಾರೂ ಕೇಳುವುದಿಲ್ಲ. ಇದಕ್ಕೆ ಏನು ಮಾಡಬೇಕೆಂದು ನಿಮ್ಮ ಯೋಚನೆ?"

"ನೀನೂ, ಅಚ್ಯುತ, ದೇವದಾಸ್ ಮೂವ್ವರೂ ನಿಮ್ಮ ನಿಮ್ಮ ಹಾಡು ಗಳನ್ನು ಯಾರಾದರೂ ಸಂಗೀತ ವಿದ್ವಾಂಸರಲ್ಲಿ ಕಲಿಯುವುದು ಒಳ್ಳೆಯದು"

"ಯುದ್ಧ ಕಾಲದಲ್ಲಿ ಶಸ್ತ್ರಾಭ್ಯಾಸ ಮಾಡಿದ ಹಾಗಾಗುತ್ತದೆ."

"ಹಾಗಾದರೂ ಚಿಂತೆಯಿಲ್ಲ ರಾಜಾ. ಶ್ರುತಿಬದ್ಧವಾಗಿ ನೀನು ಹಾಡಬಲ್ಲೆ, ನಿನ್ನ ಶಾರೀರವೂ ಚೆನ್ನಾಗಿದೆ. ಅಚ್ಯುತ ಅಲ್ಪಸ್ವಲ್ಪ ಕಲ್ತಿದ್ದಾನೆ, ಅವನದೂ ಯೋಚನೆ ಇಲ್ಲ. ದೇವದಾಸ್ ಮನಸ್ಸು ಮಾಡಿದರೆ ಬೇಕಾದ್ದು ಕಲಿಯಬಲ್ಲ. ಜತೆಗೆ ರುದ್ರಮುನಿಯಪ್ಪನ ಪಿಟೀಲ ಹಾಕಿಕೊಂಡರೆ ಅವನು ಐಬು ಗೊತ್ತಾಗದ ಹಾಗೆ ತೂಗಿಸಿಕೊಂಡು ಹೋಗುತ್ತಾನೆ."

"ಸರಿಯಪ್ಪಾ, ಯೂನಿಯನ್ ಬಾಡಿಗೆ ಕೊಡಬೇಕಾದರೆ ನಮಗೆ ಸಾಕಾಗಿ ಹೋಗತ್ತೆ. ಇನ್ನು ವಿದ್ವಾಂಸರ ಕಡೆಯಿಂದ ಮೂರು ಜನ ಪಾಠ ಹೇಳಿಸಿಕೊಳ್ಳುವುದು ಹೇಗೆ? ಅವರಿಗೆ ಕೊಡುವುದಕ್ಕೆ ಹಣ ಎಲ್ಲಿಂದ ತರುವುದು?"

"ಅದಕ್ಕೆ ಯೋಚನೆ ಮಾಡಬೇಡ ರಾಜ. ವಿದ್ವಾನ್ ಶ್ರೀನಿವಾಸಯ್ಯಂಗಾರ್ಯರು ನನಗೆ ಬೇಕಾದವರು. ಬಾದರಾಯಣ ಸಂಬಂಧ ಹಚ್ಚಿಕೊಂಡರೆ ನಮಗೆ ಸಂಬಂಧ ಬೇರೆ. ಅವರೂ ಮೇಲ್ಕೋಟೆಯವರು, ನಾವೂ ಮೇಲ್ಕೋಟೆಯವರು. ಮನೆಯಲ್ಲಿ ಪುಳಿಯೋರೆ ಪೊಂಗಲ್ ಮಾಡಿಸಿ ವಿದ್ವಾಂಸರನ್ನು ಊಟಕ್ಕೆ ಕರೆದರೆ ಎಲ್ಲಾ ಸರಿಹೋಗತ್ತೆ."

“ಅವತ್ತು ನಮ್ಮನ್ನೂ ಕರೀತಿಯೊ ಇಲ್ಲವೊ?” ಎಂದು ಅಚ್ಯುತ ಕೇಳಿದ.

“ಹೋಗೋ. ಬಿಟ್ಟ ಮೇಸ್ಟರನ್ನು ಗೊತ್ತುಮಾಡೋದಿಕ್ಕೆ ಲಂಚ ಕೊಡೋದೂ ಅಲ್ದೇ ನಿಮ್ಮನ್ನೂ ಕರೀತಾರೆ! ನೀವೇ ಎಲ್ಲಾರೂ ಸೇರಿ ಈ ಮಹೋಪಕಾರಕ್ಕೆ ಒಂದು ಭರ್ಜರಿ ಔತಣ ಹೊಡೆಸಬೇಕು.”

“ಆಗಲಪ್ಪಾ, ನಾನು ಪಾರ್ಟಿ ಮಾಡಿಸುತ್ತೇನೆ” ಎಂದು ಅಚ್ಯುತ ಒಪ್ಪಿಕೊಂಡ.

“ಬಿಸಿ ಬೇಳೆ ಹುಳಿಯನ್ನ ತಾನೆ?”

“ಜತೆಗೆ ಕಡಲೆಬೇಳೆ ಪಾಯಸ!” ಎಂದು ದೇವದಾಸ, ತಿರುಮಲ ಅವನನ್ನು ಹಾಸ್ಯಮಾಡಿದರು.

೪

ವಿಧ್ವಾನ್ ಶ್ರೀನಿವಾಸಯ್ಯಂಗಾರ್ಯರನ್ನು ಕಾಣದವರು ವಿರಳ. ಅವರು ಮೇಲುಕೋಟೆಯವರಾದರೂ ತಿರುಕ್ಕೋವಿಲ್ ಶ್ರೀನಿವಾಸಯ್ಯಂಗಾರ್ಯ ಎಂದೇ ಕರೆದುಕೊಳ್ಳುತ್ತಿದ್ದರು. ಅವರ ಪೂರ್ವಿಕರು ಯಾರೋ ಕಣಿವೆ ಕೆಳಗಿನಿಂದ ಬಂದರಂತೆ. ಆ ಅಭಿಮಾನದಿಂದ ಅಯ್ಯಂಗಾರ್ಯರು ತಿರುಕ್ಕೋವಿಲ್ ಎಂದು ಇಟ್ಟುಕೊಂಡಿದ್ದಾರೆಂದು ಜನಗಳ ಕಲ್ಪನೆಯಾಗಿತ್ತು. ಆದರೆ ಅಯ್ಯಂಗಾರ್ಯರು ಸಂಗೀತ ಪ್ರಪಂಚದಲ್ಲಿ ತಾವು ಮೈಸೂರಿನವರೆಂದು ಹೇಳಿಕೊಂಡರೆ ಗೌರವಕ್ಕೆ ಕಡಿಮೆಯೆಂದು ಭಾವಿಸಿಕೊಂಡು ತಾವು ಕಣಿವೆ ಕೆಳಗಿನವರೆಂದೂ, ಕನ್ನಡ ಇಲ್ಲಿ ಬಂದು ಕಲಿತ ಭಾಷೆಯೆಂದೂ ಹೇಳಿಕೊಳ್ಳುತ್ತಿದ್ದರು. ಅವರ ತಮಿಳು ಕೇಳಿದವರು ಆ ಮಾತನ್ನು ಸ್ವಲ್ಪ ಕಷ್ಟದಿಂದ ನುಂಗುತ್ತಿದ್ದರು.

ಶ್ರೀನಿವಾಸಯ್ಯಂಗಾರ್ಯರು ಒಂದು ಕಾಲದಲ್ಲಿ ಹೆಸರುವಾಸಿಯಾದ ಹಾಡುಗಾರರಾಗಿದ್ದರು. ತ್ರಿಕಾಲದಲ್ಲಿ ಪಲ್ಲವಿ ಹಾಡುವಷ್ಟು ಚೈತನ್ಯ. ಒಳ್ಳೆ ಬಿಕ್ಕಟ್ಟಿದ ಹಾಡುಗಾರಿಕೆ. ಕೀರ್ತನೆಗಳನ್ನು ಅನಾಗತದಲ್ಲಿ ಎತ್ತಿಕೊಂಡು ಮೃದಂಗದವನನ್ನು ಕಕ್ಕುಬಿಕ್ಕಿ ಹಿಡಿಸಿಬಿಡುತ್ತಿದ್ದರು. ಅವರನ್ನು ಕಂಡರೆ ಪಕ್ಕವಾದ್ಯಗಾರರು ಗಡಗಡನೆ ನಡುಗುತ್ತಿದ್ದರು.

ವಿದ್ವಾಂಸರು ಸಂಗೀತ ಕಲಿತದ್ದು ಮೇಲುಕೋಟೆಯ ಶಾಮಯ್ಯಂಗಾರ್ಯರ ಹತ್ತಿರವೇ ಆಗಿದ್ದರೂ ಹೆಮ್ಮೆಯಿಂದ ತಾವು ತಮಿಳು ವಿದ್ವಾಂಸರಾದ ಪೂಚಿ ಶ್ರೀನಿವಾಸಯ್ಯಂಗಾರ್ಯರ ಶಿಷ್ಯರೆಂದು ಹೇಳಿಕೊಳ್ಳುತ್ತಿದ್ದರು. ವಿದ್ವಾಂಸರಿಗೂ ಕಾಲವಾಯಿತು, ವಯಸ್ಸಾಯಿತು. ಸಂಗೀತ ಪ್ರಪಂಚದಲ್ಲಿ ಕಿರಿಯರು ತಲೆಯೆತ್ತತೊಡಗಿದರು. ಅವರ ಸ್ಥಾನ ಕದಲುತ್ತ ಬಂತು. ಶಾರೀರದಲ್ಲಿದ್ದ ಬಿಗಿ, ಗಾಂಭೀರ್ಯ, ನಾದಸಂಪತ್ತು, ಶ್ರುತಿ ಕುಗ್ಗುತ್ತ ಬಂದಿತ್ತು. ಹಾಡುವುದಕ್ಕೆ ತೊಡಗಿದರೆ ಷಡ್ಜ, ಪಂಚಮಗಳು ಬೇರೆ ಬೇರೆ ಶ್ರುತಿಯಿಂದ ಹೊರಡುತಿದ್ದವು. ವಿದ್ವಾಂಸರು ತಾವು ಹಾಡುವುದನ್ನು ಬಿಟ್ಟು ಬಿಟ್ಟು ಬೆಂಗಳೂರಿನಲ್ಲಿ ನೆಲಸಿ ವಿದ್ಯಾರ್ಥಿಗಳಿಗೆ ಕಲಿಸುವುದರಲ್ಲಿ ಉದ್ಯುಕ್ತರಾಗಿದ್ದರು.

ಅವರ ಕಲಿಸುವಿಕೆ ಹತ್ತು ವರ್ಷಗಳಿಂದ ಸಾಗಿದ್ದರೂ ಅವರ ಶಿಷ್ಯರೆಂದು ಯಾರೂ ಮುಂದಕ್ಕೆ ಬಂದಿರಲಿಲ್ಲ. ಇದಕ್ಕೆ ಅವರ ಪದ್ಧತಿ, ಮನಸ್ಸುಗಳೆರಡೂ ಕಾರಣವಾಗಿದ್ದವು. ವಿದ್ವಾಂಸರು ಮನಸ್ಸು ಬಿಚ್ಚಿ ಯಾರಿಗೂ ಹೇಳಿಕೊಡುತ್ತಿರಲಿಲ್ಲ. ಹಾಗೆ ಯಾರಾದರೂ ಅಷ್ಟಿತಷ್ಟಿ ಕಲಿತು ತಮ್ಮ ಮುಂದೆ ಹಾಡಿದರೆ ಅವರ ದೇಹಾದ್ಯಂತವೂ ರೋಷದಿಂದ ಕಂಪಿಸಿಬಿಡುತ್ತಿತ್ತು. ಹತ್ತು ಹತ್ತು ವರ್ಷಗಳಿಂದ ಅವರ ಶಿಷ್ಯವರ್ಗದಲ್ಲಿದ್ದವರು ಬಟ್ಟೆ ಒಗೆಯುವುದರಲ್ಲಿ, ಸೌದೆ ಕಡಿಯುವುದರಲ್ಲಿ, ಅಡಿಗೆ ಮಾಡುವುದರಲ್ಲಿ ನಿಷ್ಣಾತರಾಗಿದ್ದರೇ ವಿನಾ ಸಂಗೀತದ ಶ್ರೀನಾಮ ಕೂಡ ಅವರಿಗೆ ಬಂದಿರುತ್ತಿರಲಿಲ್ಲ.

ಆಜಾನುಬಾಹುವಾದ ಪ್ರಾಣಿ. ಕಪ್ಪನ್ನು ಕಪ್ಪೆನಿಸುವ ಅಚ್ಚ ಬಣ್ಣ. ಹಣೆಯ ಮೇಲೆ ಎದ್ದು ಕಾಣುವಂತೆ ಎರಡು ಬಿಳಿನಾಮ, ಒಂದು ಕೆಂಪುನಾಮ. ಮುಖದಲ್ಲಿ ಸೂಜಿಯೂರುವುದಕ್ಕೆ ಜಾಗವಿಲ್ಲದಷ್ಟು ಸಿಡುಬಿನ ಆಳವಾದ ಕಲೆ. ದೊಡ್ಡ ಗುಡಾಣದಂತಹ ಹೊಟ್ಟೆ. ಡೋಲಾಯಮಾನವಾದ ನಡೆ; ಇವೆಲ್ಲಕ್ಕೂ ಕಳಸವೆನಿಸುವಂತೆ ವಿದ್ವಾಂಸರ ಒಂದು ಕಣ್ಣು ಬೇರೆ ಹೋಗಿಬಿಟ್ಟಿತ್ತು. ಅದಕ್ಕೆ ಕಾರಣ ಕೇಳಿದರೆ 'ಹಣೆಯ ಮೇಲೆ ಹುಳುಕಡ್ಡಿಯಾಗಿತ್ತು. ಯಾರೋ ದತ್ತೂರಿ ಹಾಲು ಹಾಕಿದರೆ ಹೋಗತ್ತೆ ಎಂದು ಹೇಳಿದರು. ಹಾಗೆ ಹಾಲು ಹಾಕುವಾಗ ಒಂದು ದಿನ ಅದು ಅಕಸ್ಮಾತ್ತಾಗಿ ಕಣ್ಣಿಗೆ ಬಿತ್ತು. ಅದರ ಪರಿಣಾಮ' ಎಂದು ಹೇಳುತ್ತಿದ್ದರು. ಅವರಿಗೆ ಆಗದವರು ಮೈಸೂರಿನಲ್ಲಿ ವಿದ್ವಾಂಸರು ಒಂದು ಕಛೇರಿ ಮಾಡಿದರು. ಒಂದು ತಾಳ ತಪ್ಪಲು ಪಿಟೀಲು

ವಿದ್ವಾಂಸ ಕೆರಳಿ "ಎಲ್ಲಾರನ್ನೂ ಹೀಯಾಳಿಸುತ್ತೀ—ನೀನೇ ಈಗ ತಾಳ ತಪ್ಪಿದೆಯಲ್ಲಯ್ಯಾ!" ಎಂದು ಪಿಟೀಲಿನ ಕಮಾನಿನಿಂದ ತಿವಿದ. ಅದು ಅಕಸ್ಮಾತ್ತಾಗಿ ಕಣ್ಣಿಗೆ ತಗಲಿ, ಕಣ್ಣು ಹೋಯಿತು ಎಂದೂ ಹೇಳುತ್ತಿದ್ದರು.

ಕಛೇರಿಗಳಿಗೆ ಹೋದರೆ ವಿದ್ವಾಂಸರು ಸುಮ್ಮನೆ ಕೂಡುತ್ತಿರಲಿಲ್ಲ. ಕೂಡುವಾಗಲೆ ಹರಳೆಣ್ಣೆ ಮುಖ ಮಾಡಿಕೊಂಡು ಕೂಡುತ್ತಿದ್ದರು. ಜತೆಗೆ ಗಟ್ಟಿಯಾಗಿ ತಾಳಹಾಕುತ್ತಾ ಹಾಡುವವನು ತಾಳ ತಪ್ಪಿದರೆ ಅವನ ಕಿವಿಗೆ ಬೀಳುವಂತೆ ಶಪಿಸುತ್ತಿದ್ದರು. ಇದನ್ನು ನೋಡಿ ನೋಡಿ ಸಂಗೀತ ಮಾಡಿಸುವವರು ಆದಷ್ಟು ವಿದ್ವಾಂಸರನ್ನು ಹೊರಗಿಡಲು ಪ್ರಯತ್ನಿಸುತ್ತಿದ್ದರು.

ಯಾರ ಬಗ್ಗೆಯೂ ಒಂದು ಒಳ್ಳೆಯ ಮಾತನಾಡದಿರುವುದು ವಿದ್ವಾಂಸರಿಗೆ ಸಾಧಿಸಿದ್ದ ಹಿರಿಯ ಗುಣ. ಅವರ ಈ ದೌರ್ಬಲ್ಯವನ್ನರಿತ ಶಿಷ್ಯರು ಊರಿನ ಸಂಗೀತಗಾರರನ್ನೆಲ್ಲಾ ಅವರ ಮುಂದೆ ಸಂಹಾರಮಾಡಿ ಒಂದು ಕೀರ್ತನೆಯನ್ನು ಕಸುಗೊಂಡು ಹೋಗುತ್ತಿದ್ದರು. ತಮ್ಮ ಶಿಷ್ಯರಲ್ಲೆಲ್ಲಾ ತಬಲಾ ಪಿಳ್ಳಣ್ಣನನ್ನು ಕಂಡರೆ ವಿದ್ವಾಂಸರಿಗೆ ಸ್ವಲ್ಪ ಪ್ರೀತಿ. ಅವನ ಹಾಗೆ ಧಾರಾಳವಾಗಿ, ಬಿಚ್ಚುಮಾತಿನಿಂದ ಇತರ ವಿದ್ವಾಂಸರನ್ನು ನಿಂದಿಸುವ ಕಲೆಯನ್ನು ಯಾರೂ ಸಾಧನೆಮಾಡಿಕೊಂಡಿರಲಿಲ್ಲ.

ಕಛೇರಿಗಳಿಂದ ಬರುತ್ತಿದ್ದ ವರಮಾನ ನಿಂತುಹೋಗಲು ವಿದ್ವಾಂಸರಿಗೆ ಚಿಂತೆಗಿಟ್ಟುಕೊಂಡಿತು. ಬರುತ್ತಿದ್ದ ಶಿಷ್ಯರು ಶುಶ್ರೂಷೆಗೆ ಒದಗುತ್ತಿದ್ದರಲ್ಲದೆ ಹಣ ಕೊಡುವ ಯೋಗ್ಯತೆಯುಳ್ಳವರಾಗಿರಲಿಲ್ಲ. ಆದ್ದರಿಂದ ವಿದ್ವಾಂಸರು ಶಿಷ್ಯೆಯರ ಮೇಲೇ ಹೆಚ್ಚು ಅವಲಂಬಿಸಬೇಕಾಯಿತು. ಊರಿನ ನಾಯಕಸಾನಿಯರ ಗುರುತನದ ಗುರುತರ ಭಾರ ವಿದ್ವಾಂಸರ ಹೆಗಲ ಮೇಲೆ ಬಿದ್ದಿತ್ತು. ಅವರಲ್ಲಿ ಕೋಲಾರದ ನೀಲಾಸಾನಿ ವಿದ್ವಾಂಸರ ಮೆಚ್ಚಿನ ಶಿಷ್ಯಳಾಗಿದ್ದಳು. ನೀಲಾ ರೂಪವತಿಯಾಗಿದ್ದುದಲ್ಲದೆ ಗುರುಗಳಿಗೆ ಧಾರಾಳವಾಗಿ ಹಣ ಕೊಡುತ್ತಿದ್ದಳು. ಅವಳೊಬ್ಬಳಿಗೆ ವಿಧಿಯಿಲ್ಲದೆ ವಿದ್ವಾಂಸರು ಹೆಚ್ಚು ಪಾಠ ಹೇಳಬೇಕಾಗಿತ್ತು. ಅವಳನ್ನು ಕೂಡ ಯಾರಾದರೂ ವಿದ್ವಾಂಸರ ಮುಂದೆ ಹೊಗಳಿದರೆ "ಏನು ಹಾಡ್ತಾಳೆ ಅವಳ ಹೆಣ. ಸರಿಯಾಗಿ ಒಂದು ಪಿಳ್ಳಾರಿ ಗೀತೆ ಹಾಡೋದಿಕ್ಕೆ ಬರೋದಿಲ್ಲ" ಎಂದು ಕಟುವಾಗಿ ನುಡಿದುಬಿಡುತ್ತಿದ್ದರು.

ಯೂನಿಯನ್ನಿನ ರಾಜಕಾರಣ ಸಾಧಿಸುವುದಕ್ಕೆ ವಿದ್ವಾಂಸರಿಗೆ ಔತಣ ವನ್ನು ಸೀತಾರಾಮಯ್ಯಂಗಾರ್ ವ್ಯವಸ್ಥೆ ಮಾಡಿದ್ದರೂ ಅದನ್ನು ತೋರ ಗೊಡಲಿಲ್ಲ. ತನ್ನ ಚಿಕ್ಕ ತಮ್ಮನ ಹುಟ್ಟಿದ ಹಬ್ಬದ ನೆಪಮಾಡಿ ವಿದ್ವಾಂಸ ರನ್ನೂ ತನ್ನ ಗೆಳೆಯರನ್ನೂ ಊಟಕ್ಕೆ ಕರೆದಿದ್ದ. ವಿದ್ವಾಂಸರು ಹಸನ್ಮುಖಿ ಗಳಾಗಿ ಸಾಕಷ್ಟು ಪುಳಿಯೋರೆ, ಸಕ್ಕರೆ ಪೊಂಗಲು, ಬೂದುಗುಂಬಳಕಾಯಿ ಮಜ್ಜಿಗೆ ಹುಳಿ, ಅಂಬೊಡೆಗಳನ್ನು ಗಿಟ್ಟಿಸಿದರು. ಬೇರೆಯವರ ಸಂಗೀತವನ್ನು ಮೆಚ್ಚುವುದರಲ್ಲಿ ತೋರುತ್ತಿದ್ದ ಕಾರ್ಪಣ್ಯವನ್ನು ಬೇರೆಯವರ ಮನೆಯ ಊಟ ವನ್ನು ಮೆಚ್ಚುವುದರಲ್ಲಿ ತೋರುತ್ತಿರಲಿಲ್ಲ. "ರಸಕವಳ, ಪರಮಾತ್ಮ ಸಂಪ್ರೀತ ನಾದ" ಎಂದು ಮುಕ್ತಕಂಠದಿಂದ ಹೊಗಳಿದ್ದರು. ಆ ಸಮಯವನ್ನೇ ಸಾಧಿಸಿ ಸೀತಾರಾಮು ತನ್ನ ತಂದೆಯವರನ್ನು 'ಛೂ' ಬಿಟ್ಟ. ಅವರೂ ವಿದ್ವಾಂಸರೂ ಬಾಲ್ಯ ಪರಿಚಿತರು. ಏಕವಚನದಲ್ಲಿಯೇ ಮಾತನಾಡುವಷ್ಟು ಸಲಿಗೆ.

"ಏನೋ ರಾಮಾನುಜ ?" ಎಂದರು ವಿದ್ವಾಂಸರು.

"ಏನೂ ಇಲ್ಲಪ್ಪಾ, ಈ ಮೂರು ಹುಡುಗರೂ ನಾಟಕ ಮಾಡುತ್ತ ವಂತೆ. ನೀನು ಸ್ವಲ್ಪ ದೊಡ್ಡ ಮನಸ್ಸುಮಾಡಿ ಇವರಿಗಷ್ಟು ಹಾಡು ಕಲಿಸಿ ಕೊಡಬೇಕು."

"ನಾಟಕದ ಹಾಡು ನಾನು ಕಲಿಸಲ್ವಪ್ಪಾ"

"ಕಲಿಸೋ, ಇರಲಿ ನಿನ್ನ ಮೇಲುಕೋಟೆ ಜಂಬ" ಎಂದು ರಾಮಾನುಜ ಯ್ಯಂಗಾರ್ಯರು ಜಬರಿಸಿದ ಮೇಲೆ ವಿದ್ವಾಂಸರು ಅರೆಮನಸ್ಸಿನಿಂದ ಒಪ್ಪಿ, "ಬರಲಿ, ನಾಳೆ ಮನೆಯ ಹತ್ತಿರ" ಎಂದು ಹೇಳಿದರು. ಹಾಕಿದ ಊಟ ನಿಸ್ವಾರ್ಥಕವಾಗಲಿಲ್ಲವೆಂದು ಸೀತಾರಾಮು ಹಿಗ್ಗಿದ. ಗೆಳೆಯರೂ ಹೊರಟರು. ಸೀತಾರಾಮು ವಿನೋದಕ್ಕೆ ಅಚ್ಯುತನನ್ನು ಕುರಿತು "ಹೇಗಿತ್ತೋ ಊಟ? ಏನಾದರೂ ತಿಂದೆಯೋ, ಆಕಾಶ ನೋಡ್ತಾ ಕೂತಿದ್ದೆಯೋ?" ಎಂದ. "ಹೋಗೋ ಎಂತಹ ಊಟ. ಖಾರದ ಮುದ್ದೆ. ಕಣ್ಣುಮೂಗಲ್ಲೆಲ್ಲಾ ನೀರು ಕಿತ್ತುಕೊಂಡಿತು. ನೀನು ರಾಜಮಹೇಂದ್ರಿಗೆ ಹೋಗಿ ಒಂದು ಹೋಟ ಲಿಟ್ಟರೆ ಒಳ್ಳೆಯ ವ್ಯಾಪಾರವಾಗತ್ತೆ ನೋಡು."

" ಇರಲಿ, ನಾಳೆ ನಿಮ್ಮನೆ ಬಿಸಿಬೇಳೆ ಹುಳಿಯನ್ನ ಹೇಗಿರತ್ತೋ ನೋಡೋಣ " ಎಂದ. ಗೆಳೆಯರು ಸೊಗಸಾದ ಊಟವೂ ಆಯಿತು, ಬಂದ ಕೆಲಸವೂ ಆಯಿತು ಎಂಬ ಹಿಗ್ಗಿನಿಂದ ಹೊರಟರು.

ಮಾರನೆಯ ದಿವಸ ಗೆಳೆಯರು ವಿದ್ವಾಂಸರ ಮನೆಯಲ್ಲಿ ಹೋಗಿ ಕುಳಿತರು. ಗಂಟೆಗಳುರುಳಿದರೂ ವಿದ್ವಾಂಸರು ಹೊರಗೆ ಬರುವ ಲಕ್ಷಣ ಕಾಣಲಿಲ್ಲ. ದೇವದಾಸ ಬೇಸತ್ತು "ಹೀಗೆ ದಿನಾ ಆದರೆ ನಾವು ಸಂಗೀತ ಕಲಿತು ಪೂರೈಸಿದ ಹಾಗೇ " ಎಂದ.

ವಿದ್ವಾಂಸರು ಪೂಜೆ ಫಲಾಹಾರ ಮುಗಿಸಿಕೊಂಡು ಆಂಡವನ ಧ್ಯಾನ ಮಾಡುತ್ತಾ ಹೊರಬಿದ್ದರು. ಎದುರಿಗಿದ್ದ ಗುಂಪನ್ನು ನೋಡಿ ಕಹಿಯಾಗಿ " ಬಂದಿರಾ " ಎಂದರು.

" ಅಪ್ಪಣೆಯಾಗಿತ್ತಲ್ಲಾ, ಒಂದೆವು " ಎಂದು ರಾಜ ಹೇಳಿದ.

" ನಿಮಗೆ ಯಾರಿಗಾದರೂ ಸಂಗೀತ ಬರತ್ತೆಯೋ ?"

" ಅಚ್ಯುತನಿಗೆ ಅಲ್ಪ ಸ್ವಲ್ಪ ಬರತ್ತೆ " ಎಂದು ರಾಜ ಹೇಳಲು ವಿದ್ವಾಂಸರು ಪಕ್ಕದಲ್ಲಿದ್ದ ತಂಬೂರಿ ತೆಗೆದು ಅವನ ಕೈಗಿತ್ತರು. ಅಚ್ಯುತನ ಮುಖ ಮೈಯೆಲ್ಲೆಲ್ಲಾ ಬೆವರು ಕಿತ್ತುಕೊಂಡಿತು. ಹಾಗೇ ಶೃತಿ ಸರಿಮಾಡಿ ಕೊಂಡು ಒಂದು ಕೀರ್ತನೆ ಹಾಡಿದ. ವಿದ್ವಾಂಸರು ಮುಖ ಗಂಟಿಕ್ಕಿಕೊಂಡು " ಯಾವನೋ ಮುತ್ತಾಳೆ ನಿಂಗೆ ಸಂಗೀತ ಕಲಿಸಿಕೊಟ್ಟೋನು ? " ಎಂದರು. ಮಿಕ್ಕ ಇಬ್ಬರಲ್ಲಿದ್ದ ಧೈರ್ಯವೂ ಅಡಗಿಹೋಯಿತು.

ವಿದ್ವಾಂಸರು ರಾಜನ ಕಡೆ ತಿರುಗಿ " ನಿಂಗೆ ?" ಎಂದರು.

" ಏನೂ ಬರಲ್ಲ. "

" ಇರಲಿ. ಏನಾದರೂ ಹಾಡು. ನಿನ್ನ ಮಂಜುಳ ಕಂಠ ಹೇಗಿದೆಯೋ ನೋಡೋಣ " ಎಂದರು. ರಾಜ ನಾಟಕದ್ದೇ ಒಂದು ವೃತ್ತ ಹಾಡಿದ.

" ಶಾರೀರ ಪರವಾಯಿಲ್ಲ. ಆದರೆ ಹನ್ನೊಂದು ರಾಗ ಕಿರುಚುತ್ತೀ " ಎಂದರು ವಿದ್ವಾಂಸರು. ದೇವದಾಸನ ಕಡೆ ತಿರುಗಿ:

" ಇನ್ನು ನಿನ್ನ ಹಣೆಬರಹ ಅಷ್ಟಾಗಲಿ."

" ನನಗೇನೂ ಬರೋದಿಲ್ಲವಲ್ಲಾ "

" ಏನೂ ಬರದೆ ನಾಟಕದಲ್ಲಿ ಪಾರ್ಟುಮಾಡೋದಕ್ಕೆ ಹೊರಟ್ಟಿದ್ದೀಯಾ — ಹಾಡು ಇರಲಿ ಈ ಪಿರುಕಣೆ" ಎಂದರು. ದೇವದಾಸ ಕಣ್ಣು ಕಣ್ಣು ಬಿಡುತ್ತಾ ಜೈಮಿನಿಭಾರತದ ನಾಂದೀ ಪದ್ಯವನ್ನು ಹೇಳಿ ಮುಗಿಸಿದ. ವಿದ್ವಾಂಸರು ಅವನನ್ನು ನೋಡಿ " ನಿನಗೆ ಸಂಗೀತ ಬರೋದೂ ಸಂಗೆ ಪ್ರಾಯ ಬರೋದೂ ಒಂದೇ ಕಾಲಕ್ಕೆ ನೋಡು ! " ಎಂದರು.

ತಾವು ಬಂದ ಕೆಲಸದ ಇತ್ಯರ್ಥವಾಯಿತೆಂದು ಗೆಳೆಯರು ಏಳುವ ಸನ್ನಾಹಮಾಡುತ್ತಿದ್ದರು. ವಿದ್ವಾಂಸರು ಕೃಪೆಮಾಡಿ " ಆಗಲಿ, ನಾಳೆಯಿಂದ ಬನ್ನಿ, ಆದಷ್ಟು ಕಿರುಚಿಕೊಂಡು ಹೋಗೋರಂತೆ " ಎಂದು ಹೇಳಿ ಕಳುಹಿಸಿದರು.

ಮಾರನೆಯ ದಿವಸದಿಂದ ಗೆಳೆಯರು ವಿದ್ವಾಂಸರಲ್ಲಿಗೆ ಪಾಠಕ್ಕೆ ಹೋಗುವುದಕ್ಕಾರಂಭಿಸಿದರು. ಒಂದು ವಾರ ಮುಗಿಯುವುದರೊಳಗಾಗಿ ದೇವದಾಸ " ನನಗೆ ಈ ಸಂಗೀತ ಪಾಠವೂ ಬೇಡ, ನಿಮ್ಮ ನಾಟಕದ ಪಾರ್ಟೂ ಬೇಡ " ಎಂದು ಹೇಳಿಬಿಟ್ಟ. ಸಂಗೀತ ಹೋದರೆ ಹೋಗಲಿ ಪಾರ್ಟಿಗೆ ಅವನು ತಪ್ಪಿಹೋದರೆ ಬೇರೆಯವರನ್ನು ಹೊಂದಿಸುವುದಕ್ಕೆ ಕಷ್ಟವಾಗುತ್ತದೆಂದು ಅವನ ಶರತ್ತಿಗೆ ಒಪ್ಪಬೇಕಾಯಿತು. ಅಚ್ಯುತ ಒಂದು ಒಂದೂವರೆ ತಿಂಗಳು ಹಾಗೂ ಹೀಗೂ ಏಗಿದ. ಅವನಿಗೂ ಸಾಧ್ಯವಾಗಲಿಲ್ಲ.

" ನಾನು ಬೇರೆ ಯಾರ ಹತ್ತಿರವಾದರೂ ಕಲಿಯುತ್ತೇನಪ್ಪಾ. ಈ ಮಹಾರಾಯನ ಸಹವಾಸ ಮಾತ್ರ ಬೇಡ " ಎಂದು ಅವನೂ ಕಳಚಿಕೊಂಡ. ರಾಜನಿಗೂ ವಿದ್ವಾಂಸರ ಸಹವಾಸ ಸಾಕಾಗಿತ್ತು. ಆದರೆ ಏನೇ ಆದರೂ ಕಚ್ಚಿಕೊಂಡು ಅವರಿಂದ ಆದಷ್ಟು ಸಂಗೀತ ಕಲಿಯಬೇಕೆಂದು ಅವನು ನಿರ್ಧರಿಸಿದ್ದ. ವಿದ್ವಾಂಸರ ಪದ್ಧತಿ ಚೆನ್ನಾಗಿತ್ತು. ಸಂಗೀತದ ಅಸ್ತಿಭಾರ ಚೆನ್ನಾದರೆ ಮುಂದೆ ತಾನೇ ಬೆಳಸಿಕೊಳ್ಳಬಹುದೆಂದು ಅವನಿಗೆ ಗೊತ್ತಿತ್ತು. ವಿದ್ವಾಂಸರ ಹೇಳಿಕೆಯ ಮಾತು, ಅಸಹ್ಯ ಆಚರಣೆ, ಪರನಿಂದೆಗಳನ್ನೆಲ್ಲಾ ಸಹಿಸಿಕೊಂಡು ತಪ್ಪದೆ ಅವರಲ್ಲಿ ಹೋಗಿ, ಅವರ ' ಮರ್ಜಿ ' ಕಾದು ಆದಷ್ಟು ವಿದ್ಯೆಯನ್ನು ಸಂಗ್ರಹಿಸಲು ಮೊದಲುಮಾಡಿದ.

ರಾಜ ನಿರೀಕ್ಷಿಸಿದಂತೆ ನಾಟಕ ಬೇಗ ರಂಗಭೂಮಿಯ ಮೇಲೆ ಬರುವ ಸಂದರ್ಭ ಕಾಣಲಿಲ್ಲ. ಪರೀಕ್ಷೆಯ ಕಾಲ ಸಮೀಪಿಸಿತ್ತು. ದೇವದಾಸ ಡಿಗ್ರಿ ಪರೀಕ್ಷೆಗೆ ಕೂಡುವವನಿದ್ದ. ತಿರುಮಲ, ಸೀತಾರಾಮು ಎಫ್. ಎಗೆ ಕೂಡುವವರಿದ್ದರು. ರಾಜ ಅಚ್ಯುತರಿಗೆ ಮೊದಲನೆಯ ವರ್ಷದ ಎಫ್. ಎ. ಪರೀಕ್ಷೆ ಕ್ಲಾಸು ಪರೀಕ್ಷೆಯಾದುದರಿಂದ ಹೆಚ್ಚು ತೊಂದರೆಯಿರಲಿಲ್ಲ. ಆದರೆ ಅಚ್ಯುತನ ಮನೆಯವರು ಗೊಣಗುಟ್ಟುತ್ತಿದ್ದರು. ಅವನೂ ದಿನ ತಪ್ಪಿಸಿ ದಿನ ಅಭ್ಯಾಸಕ್ಕೆ ಬರುತ್ತಿದ್ದ.

ಈ ಪರೀಕ್ಷೆಯ ಪ್ರಾರಬ್ಧ ಒದಗಿ ನಾಟಕ ನಿಲ್ಲುವ ಹೊತ್ತು ಬಂತಲ್ಲಾ ಎಂದು ರಾಜನಿಗೆ ತುಂಬ ವ್ಯಸನವಾಯಿತು. ಬಂದ ಪಾಠವಾದರೂ ಜ್ಞಾಪಕ ವಿರಲಿ ಎಂದು ಗೆಳೆಯರನ್ನು ನಾಲ್ಕೈದು ದಿವಸಕ್ಕೆ ಒಮ್ಮೆಯಾದರೂ ಕಲೆ ಹಾಕಿ ಅಭ್ಯಾಸವನ್ನು ಸಾಗಿಸುತ್ತಿದ್ದ. ತಾನು ಮಾತ್ರ ದಿನವೂ ತಪ್ಪದೆ ತನ್ನ ಪಾತ್ರದ ಅಭ್ಯಾಸ, ಸಂಗೀತಾಭ್ಯಾಸಗಳನ್ನು ಮಾಡಿಕೊಂಡು ಹೋಗುತ್ತಿದ್ದ.

ಪರೀಕ್ಷೆಯು ಸಮೀಪಿಸಿದರೂ ರಾಜನಿಗೆ ಆ ಕಡೆಗೆ ಲಕ್ಷ್ಯವೇ ಹೋಗಿರ ಲಿಲ್ಲ. ಈ ವರ್ಷ ಹಾಗೂ ಹೀಗೂ ತಳ್ಳಿ ಮುಂದೆ ಕಾಲೇಜಿಗೆ ನಮಸ್ಕಾರ ಹಾಕಿಬಿಡುವುದೆಂದು ನಿಶ್ಚಯಿಸಿದ್ದನು. ಒಂದು ಬಿ. ಎ. ಅಥವಾ ಎಂ. ಎ. ಮಾಡಿಕೊಂಡರೆ ಸರ್ಕಾರಿ ಕೆಲಸ ಸಿಕ್ಕುತ್ತಿತ್ತು. ಆದರೆ ಜೀವಮಾನವೆಲ್ಲಾ ತಲೆಯ ಮೇಲೆ ಸಿಂಬಿಹೊತ್ತು, ಕಂಡವರ ನಿರರ್ಥಕ ಸೇವೆಯಲ್ಲಿ ಕಳೆಯುವುದು ರಾಜನ ಮನಸ್ಸಿಗೆ ಬೇಡವಾಗಿತ್ತು.

ರಾಜ ಕಾಲೇಜಿಗೆ ನೆಪಕ್ಕೆ ಮಾತ್ರ ಹೋಗಿಬರುತ್ತಿದ್ದ. ಕ್ಲಾಸಿನಲ್ಲಿ ಕುಳಿತರೂ ಯಾವದಾದರೂ ಗ್ರಂಥ ಓದುವುದರಲ್ಲಿಯೇ ಅವನ ಚಿತ್ತ. ಅಧ್ಯಾಪಕರು ಊದುವ ಶಂಖ ಊದಿ ಹೋಗುತ್ತಿದ್ದರು. ಅದರ ಒಂದು ಸ್ವರವೂ ಅವನ ಕಿವಿಯ ಮೇಲೆ ಬೀಳುತ್ತಿರಲಿಲ್ಲ.

ರಾಜನ ಲಕ್ಷ್ಯ ಹೆಚ್ಚು ನಾಟಕಸಾಹಿತ್ಯದ ಕಡೆಗೆ ಹೊರಳಿತ್ತು. ಜಗತ್ಪ್ರಸಿದ್ಧ ನಾಟಕಕಾರರ ಕೃತಿಗಳು, ಅವುಗಳ ಮೇಲೆ ತಜ್ಞ ವಿಮರ್ಶಕರು ಬರೆದಿದ್ದ ವ್ಯಾಖ್ಯಾನಗಳು, ನಾಟಕಶಾಸ್ತ್ರವನ್ನು ಕುರಿತ ಗ್ರಂಥಗಳನ್ನು ಆಸಕ್ತಿಯಿಂದ ಓದುತ್ತಿದ್ದ. ತನ್ನ ಪ್ರಿಯಕವಿ ಷೇಕ್ಸ್‌ಪಿಯರನ್ನು

ಓದಿದಂತೆಲ್ಲಾ ಹೊಸ ಹೊಸ ಭಾವನೆಗಳು, ವಿಚಾರಗಳು ಹುಟ್ಟುತ್ತಿದ್ದವು. ಅವನ ನಾಟಕಗಳ ಮೇಲೆ ಬ್ರ್ಯಾಡ್ಲಿ, ಕ್ವಿಲ್ಲರ್ ಕೌಚ್, ಡೌಡನ್, ಮಾಸಫೀಲ್ಡ್, ಹ್ಯಾರಿಸ್ ಮೊದಲಾದ ಪಂಡಿತರು ಬರೆದಿದ್ದ ಗ್ರಂಥಗಳನ್ನು ಮತ್ತೆ ಮತ್ತೆ ಓದಿ ತನ್ನ ವಿಚಾರಸರಣಿಯೊಂದಿಗೆ ತುಲನೆ ಮಾಡಿ ನೋಡಿ ಕೊಳ್ಳುತ್ತಿದ್ದನು. ತನ್ನ ಸ್ವತಂತ್ರಭಾವನೆಯನ್ನೇ ಬ್ರ್ಯಾಡ್ಲಿಯೋ ಡೌಡನ್ನನೋ ಹೇಳಿಬಿಟ್ಟಿದ್ದರೆ ರಾಜನಿಗೆ ಅಪರಿಮಿತ ಆನಂದವಾಗುತ್ತಿತ್ತು! ದೊಡ್ಡವರು ಕೂಡ ನನ್ನ ಹಾಗೆ ವಿಚಾರ ಮಾಡುತ್ತಾರೆ ಎಂದು ಹಿಗ್ಗುತ್ತಿದ್ದನು.

ಪರೀಕ್ಷೆ ಮುಗಿದು ಬೇಸಿಗೆ ರಜಾ ಆರಂಭವಾಗುವ ವರೆಗೆ ಯಾರನ್ನೂ ನಾಟಕದ ಬಗ್ಗೆ ಮಾತನಾಡಿಸುವ ಹಾಗಿರಲಿಲ್ಲ. ಶಾಕುಂತಲದ ಜತೆಗೆ ರೋಮಿಯೊ ಆಂಡ್ ಜೂಲಿಯಟ್ ನಾಟಕದ ಅನುವಾದ 'ರಾಮವರ್ಮ, ಲೀಲಾವತಿ'ಯನ್ನು ತೆಗೆದುಕೊಂಡು ಆಳವಾಗಿ ಅಭ್ಯಾಸಮಾಡಿ, ರಂಗ ಪ್ರದರ್ಶನಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಲಾರಂಭಿಸಿದನು. ರಜಾ ಬರುತ್ತಲೂ ಒಟ್ಟಿಗೆ ೩-೪ ನಾಟಕಗಳನ್ನು ಕೂಡಿಸಬೇಕು. ಅವುಗಳನ್ನು ಒಮ್ಮೆ ಬೆಂಗಳೂರಿನಲ್ಲಿ ಆಡಿ, ಒಂದು ಪ್ರವಾಸ ಹೊರಟು ಹುಬ್ಬಳ್ಳಿಯ ತನಕ ಹೋಗಿ ಬರಬೇಕೆಂದು ಅವನ ಆಸೆಯಾಗಿತ್ತು.

೫

ತನ್ನ ಸಂಗೀತ ಶಿಕ್ಷಣವನ್ನು ಶಾಕುಂತಲದ ಹಾಡುಗಳನ್ನು ಕಲಿಯುವ ದರಲ್ಲಿ ಮುಗಿಸಿಬಿಡಬೇಕೆಂದಿದ್ದ ರಾಜ ಇನ್ನೂ ಒಂದು ಹೆಜ್ಜೆ ಮುಂದಿಡಲು ಯೋಚಿಸಿದ. ಸಶಾಸ್ತ್ರೀಯವಾಗಿ ಸಂಗೀತವನ್ನು ಕಲಿತೇ ಬಿಡುವುದು. ಅದರಿಂದ ನಾಟಕಕ್ಕೆ ಎಷ್ಟು ಪ್ರಯೋಜನವೋ ಅಷ್ಟನ್ನು ಉಪಯೋಗಿಸಿ ಕೊಳ್ಳುವುದು. ಹೆಚ್ಚಿಗೆ ಕಲಿತರೆ ನಷ್ಟವೇನೂ ಇಲ್ಲವಲ್ಲಾ ಎಂದು ವಿಚಾರ ಮಾಡಿ ಕೀರ್ತನೆ ಪಾಠವನ್ನು ಆರಂಭಿಸಿದ್ದ. ಗುರುಗಳು ತನಗೆ ಹೇಳಿಕೊಡು ತ್ತಿದ್ದುದು ಸ್ವಲ್ಪವೇ ಆಗಿದ್ದರೂ ಇತರರಿಗೆ ಹೇಳಿಕೊಡುವುದನ್ನು ಕೇಳುವ ಅವಕಾಶ ಸಿಕ್ಕುತ್ತಿತ್ತು. ನೀಲಾಪಾನಿ ಬಂದುಬಿಟ್ಟರಂತೂ ಗಂಟೆಗಟ್ಟಳೆ ಪಾಠವಾಗುತ್ತಿತ್ತು. ಹೊರಗೇ ಕುಳಿತು ರಾಜ ಆಲಿಸಿ ಕೇಳಿ ತಾನೇ ಅಭ್ಯಾಸ ಮಾಡಿಕೊಳ್ಳುತ್ತಿದ್ದ. ಶಾವಿಗೆ ಕಣಕದಂತಹ ಶಾರೀರ; ಎಳೆದಂತೆ ಬರು

ತ್ತಿತ್ತು. ಕೇಳುವ ಕಿವಿ ನೆಟ್ಟಗಿದ್ದುದರಿಂದ ಎಲ್ಲಿಯೂ ಅಪಶೃತಿ ನುಡಿಯು ತ್ತಿರಲಿಲ್ಲ.

ಒಂದು ದಿನ ಗುರುಗಳ ಮನೆಯಲ್ಲಿ ತ್ಯಾಗರಾಜ ಜಯಂತಿ ಉತ್ಸವ ಏರ್ಪಾಡಾಯಿತು. ಶಿಷ್ಯರೆಲ್ಲಾ ಸ್ವಲ್ಪ ಸ್ವಲ್ಪ ಹಾಡಬೇಕೆಂದೂ ಕೊನೆಯಲ್ಲಿ ಗುರುಗಳು ಹಾಡಬೇಕೆಂದೂ ನಿರ್ಣಯವಾಯಿತು. ಉತ್ಸವಕ್ಕೆ ಕಿಕ್ಕಿರಿಯು ವಷ್ಟು ಜನ ಬಂದು ತುಂಬಿದ್ದರು. ಕರೆಸಿಕೊಂಡು ಬಂದಿದ್ದವರಿಗಿಂತಲೂ ಕರೆಸಿ ಕೊಳ್ಳದೆ ಬಂದಿದ್ದವರೇ ಹೆಚ್ಚಾಗಿದ್ದುದರಿಂದ ವಿದ್ವಾಂಸರ ಮನೆಯ ಹೊರ ಅಂಗಳವೂ ತುಂಬಿಹೋಗಿತ್ತು.

ಎಲ್ಲರೂ ಒಂದೊಂದು ಕೀರ್ತನೆ ಹಾಡಿದರು. ರಾಜನ ಪಾಳಿ ಬಂತು. ಅವನು ಕರಹರಪ್ರಿಯ ರಾಗದಲ್ಲಿ ಒಂದು ಕೀರ್ತನೆ ಹಾಡಿದ. ಅದನ್ನು ಕೇಳಿ ವಿದ್ವಾಂಸರು, ಬೆರಗಾದರು. ಅದನ್ನು ತಾವು ರಾಜನಿಗೆ ಪಾಠ ಮಾಡಿಸಿರಲಿಲ್ಲ. ಆದರೂ ತಮ್ಮ ಧಾಟಿಯನ್ನೇ ಹಿಡಿದು ತಪ್ಪದೆ ಶ್ರಾವ್ಯವಾಗಿ ಹಾಡಿದ್ದ. ಗುರುಗಳೇ 'ಇನ್ನೊಂದು ಹಾಡು' ಎಂದರು. ತೋಡಿ ರಾಗವನ್ನೆತ್ತಿಕೊಂಡು ಸ್ವಲ್ಪ ರಾಗ ಹಾಡಿ ಕೀರ್ತನೆ ಹಾಡಿದ. ಶ್ರಾವಕರು 'ಭಲೆ ಭಲೆ' ಎಂದರು. ನೀಲಾಸಾನಿ ಸಂತೋಷದಿಂದ ಕಣ್ಣೀರನ್ನೊರಸಿಕೊಂಡಳು. ವಿದ್ವಾಂಸರು ಬೆಕ್ಕಸಬೆರಗಾದರು.

ರಾಜನ ಅನಂತರ ನೀಲಾಸಾನಿ ಹಾಡಬೇಕಾಗಿತ್ತು. ಅವಳ ಹಾಡು ಕೇಳುವುದಕ್ಕೆ ಅಷ್ಟೊಂದು ಜನ ಸೇರಿತ್ತು. ರಾಜನ ಅನಂತರ ಹಾಡಿದ್ದಕ್ಕೋ ಏನೋ ಅವಳ ಮಲಯಮಾರುತ, ಸುರಟಿ ನೀರಸವಾದವು.

ಉತ್ಸವ ಮುಗಿದು ಅತಿಥಿ ಅಭ್ಯಾಗತರು ಹೋದ ಮೇಲೆ, ವಿದ್ವಾಂಸರು ಅವರ ಶಿಷ್ಯರು ಅಷ್ಟೇ ಉಳಿದರು. ವಿದ್ವಾಂಸರು ನೀಲನನ್ನುದ್ದೇಶಿಸಿ, "ನಿನಗೆ ಪಾಠ ನಾನು ಕಲಿಸೋದು—ಅದನ್ನ ಕಲಿಯೋನು ರಾಜ" ಎಂದರು. ನೀಲಾ ನಗುತ್ತಾ "ಅವರೇನು ಬೆರಳು ತೋರಿಸಿದರೆ ಹಸ್ತ ನುಂಗುವ ಮೂರ್ತಿ. ನೀವು ದೊಡ್ಡ ಮನಸ್ಸು ಮಾಡಿದರೆ ನಿಮ್ಮ ಹೆಸರು ಉಳಿಸು ತ್ತಾರೆ!" ಎಂದಳು. ರಾಜ, ನೀಲನಿಗೆ ಕಣ್ಣಲ್ಲಿಯೇ ಕೃತಜ್ಞತೆಯನ್ನು ಸೂಚಿಸಿದ.

ಮಾರನೆಯ ದಿವಸದಿಂದ ರಾಜನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ವಿದ್ವಾಂಸರು ಕೊಂಚ ಮನಸ್ಸಿಟ್ಟು ರಾಜನಿಗೆ ಪಾಠ

ಹೇಳಿಕೊಡಲುಪಕ್ರಮಿಸಿದರು. ನೀಲನಿಗೆ ಹೊಸ ಕೀರ್ತನೆ ಹೇಳಿಕೊಡ ಬೇಕಾದಲ್ಲಿ ರಾಜನನ್ನು ಕರೆದು ಅವಳ ಜತೆಯಲ್ಲಿ ಅವನಿಗೂ ಪಾಠ ಹೇಳಿಕೊಡುತ್ತಿದ್ದರು. ನೀಲಾ ಅದಕ್ಕೆ ಆಕ್ಷೇಪಣೆ ತೆಗೆಯದೆ ಸಂತೋಷ ಪಟ್ಟಿದ್ದಳು.

ಒಂದು ದಿನ ರಾಜ, ನೀಲಾ ಇಬ್ಬರೂ ವಿದ್ವಾಂಸರ ಮನೆಯಲ್ಲಿ ಕುಳಿತಿದ್ದರು. ಹೊರಗೆ ಹೋಗಿದ್ದ ವಿದ್ವಾಂಸರು ಇನ್ನೂ ಮನೆಗೆ ಬಂದಿರಲಿಲ್ಲ. ನೀಲಾ ಮಾತು ತೆಗೆದಳು:

"ನೀವು ಸಂಗೀತ ಕಲಿತದ್ದು ಸಾರ್ಥಕವಾಗುತ್ತೆ!"

"ಏಕೆ?"

"ನಿಮ್ಮ ಶಾರೀರ ಸಂಗೀತಕ್ಕಾಗಿಯೇ ಮಾಡಿದ ಶಾರೀರ. ಗಮಕಗಳು ಲೀಲಾಜಾಲವಾಗಿ ನುಡಿಯುತ್ತವೆ. ಮನೋಭಾವ ಬಹಳ ಚೆನ್ನಾಗಿದೆ."

"ನೀನು ನನಗೆ ಬಹಳ ಉಪಕಾರ ಮಾಡಿದೆ ನೀಲಾ."

"ನನ್ನಿಂದ ನಿರ್ವಾಹವಿಲ್ಲದ ಉಪಕಾರವಾದದ್ದೇನು?"

"ನೀನು ಜಯಂತಿ ದಿವಸ ಗುರುಗಳಿಗೆ ಒಂದು ಮಾತು ಹೇಳದಿದ್ದರೆ ಅವರು ಇಷ್ಟು ಶ್ರದ್ಧೆಯಿಂದ ನನಗೆ ಕಲಿಸುತ್ತಿರಲಿಲ್ಲ."

"ನಿಮಗೆ ಚೆನ್ನಾಗಿ ಸಂಗೀತ ಬಂದರೆ ಒಳ್ಳೆಯ ಸಂಗೀತ ಕೇಳಬಹು ದೆಂದು ಸ್ವಾರ್ಥಕ್ಕೆ ನಾನು ಮಾಡಿದ್ದು."

"ಏನೇ ಆಗಲಿ. ನಿನಗೆ ನಾನು ತುಂಬ ಋಣಿ."

"ಹಾಗಾದರೆ ನನ್ನ ಋಣ ತೀರಿಸುತ್ತೀರಾ?"

"ಖಂಡಿತವಾಗಿ."

"ಸತ್ಯವಾಗಿ........?"

"ಸತ್ಯವಾಗಿ."

"ನಮ್ಮ ಮನೆಯ ತನಕ ಬಂದು ಹೋಗಬೇಕು."

ರಾಜನಿಗೆ ಯೋಚನೆಯಾಯಿತು. ಆದರೆ ಮಾತು ಕೊಟ್ಟಿದ್ದಾಗಿತ್ತು. ಸತ್ಯವಾಗಿ' ಎಂದು ಪ್ರಮಾಣ ಮಾಡಿದ್ದೂ ಆಗಿತ್ತು.

" ಎಂದು ? "

" ಇವತ್ತೇ ಬನ್ನಿ. "

" ನಿನ್ನ ಮನೆ ಎಲ್ಲಿ ? "

" ಬಹಳ ದೂರವಿಲ್ಲ. ಹಿಂದಿನ ಸಾಲಿನಲ್ಲಿ ಚೌಕದಿಂದ ಮೂರನೆಯ ಮನೆ. ಮನೆಯ ಮುಂದೆ ಎರಡು ತೆಂಗಿನ ಮರಗಳಿವೆ. ಪಾಠ ಮುಗಿಯುತ್ತಲೂ ನಾನು ಮೊದಲು ಹೋಗುತ್ತೇನೆ. ನೀವು ಹಿಂದಿನಿಂದ ಬನ್ನಿ. "

" ಆಗಲಿ. "

" ಒಂದು ಮಾತು. ಗುರುಗಳ ಹತ್ತಿರ ಈ ವಿಷಯ ಪ್ರಸ್ತಾಪಿಸಬೇಡಿ. "

" ನಾನೇಕೆ ಪ್ರಸ್ತಾಪಿಸಲಿ. "

ಗುರುಗಳು ಬಂದ ಕೂಡಲೆ ನೀಲಾ ತನಗೆ ಮೈಯಲ್ಲಿ ಚೆನ್ನಾಗಿಲ್ಲವೆಂದು ಸಬೂಬು ಹೇಳಿ ಮನೆಗೆ ಹೊರಟುಬಿಟ್ಟಳು. ರಾಜ ತನ್ನ ಪಾಠ ಮುಗಿಸಿಕೊಂಡು ಅವಳ ಮನೆಗೆ ಹೊರಟ.

ನೇರವಾಗಿ ಅವಳ ಮನೆಗೆ ಹೋಗುವುದಕ್ಕೆ ಧೈರ್ಯವಾಗದು. ರಸ್ತೆಯ ಕೊನೆಯವರೆಗೆ ಹೋಗಿ, ಅಲ್ಲಿಯೇ ಸ್ವಲ್ಪ ಹೊತ್ತು ಸುತ್ತಾಡಿಕೊಂಡು ನೀಲನ ಮನೆಯ ಕಡೆ ಬಂದ. ಬಾಗಿಲಿನಲ್ಲಿಯೇ ಅತಿಥಿಯನ್ನು ಕಾಯುತ್ತಿದ್ದ ನೀಲಾ ಸ್ವಾಗತ ಬಯಸಿದಳು. ಬೇರೆ ವಿಚಾರಮಾಡುವುದಕ್ಕೂ ಪುರಸತ್ತು ಇಲ್ಲದೆ ಹೋಯಿತು. ರಾಜ ಅವಳ ಜತೆಯಲ್ಲಿ ಮನೆಯನ್ನು ಹೊಕ್ಕ.

ಚಿಕ್ಕದಾದರೂ ಚೊಕ್ಕದಾದ ಮನೆ. ಮುಂದೆ ಹೂವಿನ ಸಣ್ಣ ಕೈದೋಟ. ಸಾಲಿಗೆ ಗುಲಾಬಿ ಗಿಡಗಳು ಹೂ ಬಿಟ್ಟು ನಿಂತಿದ್ದವು. ಮನೆಗೇ ಹೊದಿಸಿದ ಹಾಗೆ ಜಾಜಿಯ ಬಳ್ಳಿ. ಅಲ್ಲಿ ಇಲ್ಲಿ ಕುಂಡದಲ್ಲಿಟ್ಟಿದ್ದ ಕೆಲವು ಕ್ರೋಟನ್ ಗಿಡಗಳು. ಮೂಲೆಯಲ್ಲೊಂದು 'ನಿಷಾರಾಣಿ'ಯ ಪೊದರು. ತೋಟ ಮಾಲಿಕಳ ಅಭಿರುಚಿಯನ್ನು ಸಾರುತ್ತಿತ್ತು.

ಮನೆಯೂ ಅಷ್ಟೇ ಓರಣವಾಗಿತ್ತು. ಬಾಗಿಲು, ಕಿಟಕಿಗಳಿಗೆ ತೆರೆಗಳು. ತೊಟ್ಟಿಯ ಬಾಗಿಲಿಗೆ ಅಂದವಾದ ಮಣಿ-ತೋರಣ. ಗೋಡೆಗಳ

ಮೇಲೆ ಸುಂದರವಾದ ನಾಲ್ಕು ಚಿತ್ರಗಳು. ಬಿಡಿಬಿಡಿಯಾಗಿ ನಾಲ್ಕಾರು ಕುರ್ಚಿ ಮೇಜುಗಳು. ಶ್ರೀಮಂತಿಕೆಯ ಆಡಂಬರವಿಲ್ಲದ ಅಂದಚೆಂದಗಳು ಮನೆಯಲ್ಲಿ ಮೂಡಿದ್ದವು.

ರಾಜ ವೆರಾಂಡದಲ್ಲಿದ್ದ ಕುರ್ಚಿಯ ಮೇಲೆ ಕುಳಿತ. ನೀಲಾ ಅವನನ್ನು ಉಪಚರಿಸಿ ಒಳಗೆ ಕರೆದೊಯ್ದಳು. ಜಮಖಾನಾ ಹಾಸಿದ ತೊಟ್ಟಿ. ಮೂಲೆಯಲ್ಲಿ ಗೌಸು ಹಾಕಿ ಎರಡು ತಂಬೂರಿಗಳು. ಮಧ್ಯೆ ಮಧ್ಯೆ ಒಂದೊಂದು ಒರಗುದಿಂಬು ಇತ್ತು. ನೀಲನ ಸಡಗರ ಹೇಳತೀರದು. ಮನೆಯ ಎಲ್ಲಾ ಬಾಗಿಲುಗಳಲ್ಲಿಯೂ ಅವಳ ಓಡಾಟವೇ ಆಗಿತ್ತು. ಕೈಯಲ್ಲಿ ತಿಂಡಿ, ಹಣ್ಣುಗಳ ತಟ್ಟೆ ಹಿಡಿದು ತಂದು ರಾಜನ ಮುಂದೆ ಇಟ್ಟಳು. ಅದರ ಹಿಂದೆ ಟ್ರೇಯಲ್ಲಿ ಕಾಫಿಯನ್ನು ಒಬ್ಬ ಹುಡುಗ ತಂದ.

" ಇವನೇ ನನ್ನ ತಮ್ಮ ಗಂಗಾಧರ. "

" ಒಬ್ಬನೇ ತಮ್ಮನೋ ? "

" ಹೌದು. ತಂಗಿಯೊಬ್ಬಳಿದ್ದಳು, ತೀರಿಕೊಂಡಳು. ನಾನು, ತಾಯಿ, ಈ ತಮ್ಮ ನಾವೇ ಮೂವರು ಮನೆಯಲ್ಲಿ. ತೆಗೆದುಕೊಳ್ಳಿ. ಬಡವಳ ಮನೆ ಎಂದು ಬೇಸರಪಟ್ಟುಕೊಳ್ಳಬಾರದು. "

" ಇವೆಲ್ಲಾ ಬಡತನದ ಗುರುತಾದರೆ ಇನ್ನು ಶ್ರೀಮಂತಿಕೆ ಹೇಗಿರುತ್ತದೆಯೋ ! ಊಟದ ಹೊತ್ತು. ಇವೆಲ್ಲಾ ಏತಕ್ಕೆ ಮಾಡಿಸಿದೆ. ನನಗೆ ಸ್ವಲ್ಪ ಕಾಫಿಯಾದರೆ ಸಾಕು. "

" ಉಂಟೇ. ನೀವು ತೆಗೆದುಕೊಳ್ಳಲೇಬೇಕು "

ರಾಜ ತಿಂಡಿಗಳನ್ನು ರುಚಿ ನೋಡಿದ. ಕಾಫಿಯನ್ನು ಬಸಿಗೆ ಹಾಕುತ್ತಾ " ನೀನೂ ತೆಗೆದುಕೋ " ಎಂದ.

" ಆಗಲಿ " ಎಂದು ನೀಲಾ ಅವನ ಜತೆಯಲ್ಲಿ ಸ್ವಲ್ಪ ತೆಗೆದುಕೊಂಡಳು.

" ಬಹಳ ದಿವಸದಿಂದ ನಿಮ್ಮನ್ನು ನಮ್ಮನೇಗೆ ಕರೆಯಬೇಕೆಂಟಿದ್ದೆ. "

" ಏಕೆ ಕರೆಯಲಿಲ್ಲ ? "

" ನೀವು ಏನೆಂದುಕೊಳ್ಳುತ್ತೀರೋ ಎಂದು. "

" ಇದರಲ್ಲೆಲ್ಲಾ ಅಂದುಕೊಳ್ಳುವುದಕ್ಕೆ ಏನಿದೆ. "

" ಇವತ್ತು ಪಾಠ ಏನಾಯಿತು ? "

" ಕಾಂಬೋದಿ ಕೀರ್ತನೆಯಾಯಿತು. "

" ಹಾಡುವಿರೇನು ? "

" ತಂಬೂರಿ ತೆಗಿ ನೋಡೋಣ. "

ನೀಲಾ ಎರಡು ತಂಬೂರಿಗಳನ್ನೂ ತೆಗೆದು ಶ್ರುತಿಮಾಡಿದಳು. ಒಂದನ್ನು ರಾಜನ ಕೈಗಿತ್ತು ಮತ್ತೊಂದನ್ನು ತಾನು ಹಿಡಿದಳು. ರಾಜ ತಂತಿಯ ಮೇಲೆ ಒಂದೆರಡು ಸಲ ಕೈಯಾಡಿಸಿ " ನೀನೂ ಹಾಡು. " ಎಂದ.

" ನೀವು ಆರಂಭಿಸಿ. "

ರಾಜ ಮಧ್ಯಮಾವತಿ ಎತ್ತಿಕೊಂಡ. ಒಂದು ಆವರ್ತ ಅವನು ಹಾಡುತ್ತಲೂ ನೀಲಾ ಒಂದು ಆವರ್ತ ಹಾಡುವುದು, ಹೀಗೆ ಸಾಗಿತ್ತು. ಹೊತ್ತು ಜಾರುತ್ತಿದ್ದುದರ ಪರಿವೆಯೇ ಇರಲಿಲ್ಲ. ಹಾಡು ಮುಗಿಯುವ ಹೊತ್ತಿಗೆ ಒಂದು ಗಂಟೆಯಾಗಿತ್ತು. ತಂಬೂರಿಯನ್ನು ಕೆಳಗಿಳಿಸಿ " ಸೊಗಸಾದ ತಂಬೂರಿ ! " ಎಂದು ಹೇಳಿದ.

" ನಿಮ್ಮದು ಸೊಗಸಾದ ಹಾಡುಗಾರಿಕೆ ! " ಎಂದು ನೀಲಾ ಹೇಳಿದಳು

" ಇನ್ನು ಹೊರಡಲೇ ? "

" ಇಷ್ಟು ಬೇಗ ಹೊರಡಬೇಕೇ ! ಇಲ್ಲೇ ಊಟಕ್ಕೆ ಏಳಬಾರದೇ ? "

" ನಿನ್ನ ಫಲಹಾರ ಎರಡು ದಿವಸಕ್ಕೆ ಗ್ರಾಸವಾಗಿದೆ. ಇನ್ನು ಊಟ ಯಾರಿಗೆ ಬೇಕು. "

" ನಮ್ಮ ಮನೆ ನೋಡಲೇ ಇಲ್ಲವಲ್ಲಾ. "

ರಾಜನನ್ನು ಕರೆದುಕೊಂಡು ಮನೆಯನ್ನು ತೋರಿಸಿಕೊಂಡು ಬಂದಳು. ಅವಳ ಶಯನಗೃಹದ ಅಂದ ಚೆಂದವನ್ನು ಕಂಡು ಬೆರಗಾದ.

" ನಿನ್ನದು ಸೊಗಸಾದ ಅಭಿರುಚಿ ನೀಲಾ. "

" ಅದು ಇಂದು ಸಾರ್ಥಕವಾಯಿತು. "

" ಏಕೆ ? "

" ನೀವು ಕಂಡಿರಿ ; ಮೆಚ್ಚಿದಿರಿ. "

" ನಾನು ಕಾಣುವುದೂ ಮೆಚ್ಚುವುದೂ ನಿನಗೆ ಅಷ್ಟು ಹೆಚ್ಚಿನದಾಗಿತ್ತೇ ? "

" ಅದನ್ನು ಮಾತಿನಲ್ಲಿ ಹೇಳಲಾರೆ. "

" ನನಗೆ ಹೊತ್ತಾಗುತ್ತ ಬಂತು. ಹೊರಡುತ್ತೇನೆ. "

" ಮತ್ತೆ ಯಾವಾಗ ಬರುವಿರಿ ? "

" ಬರುತ್ತೇನೆ. "

" ಯಾವ ಸಂಕೋಚವೂ ಇಟ್ಟುಕೊಳ್ಳಕೂಡದು. ಇದು ನಿಮ್ಮ ಮನೆ ಎಂದು ಭಾವಿಸಿಕೊಳ್ಳಬೇಕು. ನೀವು ಬರುತ್ತಿದ್ದರೆ ಜತೆಯಲ್ಲಿ ಅಭ್ಯಾಸಮಾಡುವುದಕ್ಕಾಗುತ್ತದೆ. "

" ಹಾಗೇ ಆಗಲಿ " ಎಂದು ಬೀಳ್ಕೊಂಡ. ಅವನ ಮನಸ್ಸು ಒಂದು ಅವ್ಯಕ್ತ ಆನಂದ, ದುಃಖಗಳೆರಡರ ಮಧ್ಯೆ ಹಂಚಿಹೋಗಿತ್ತು. ಶಾಂತಿಯ ತಂಗಾಳಿ ಒಮ್ಮೆ ಬೀಸಿ ಮರುಕ್ಷಣವೇ ಪ್ರಚಂಡ ಮಾರುತವು ಅದನ್ನಳಿಸಿಕೊಂಡು ಹೋದಂತಾಗಿತ್ತು. ನಿಧಾನವಾಗಿ, ಬಹು ಪ್ರಯಾಸದಿಂದ ಮನೆಯನ್ನು ಮುಟ್ಟಿದ.

ಸೀತಮ್ಮ ಗಂಡನ ಬರುವನ್ನೇ ಕಾಯುತ್ತ ನಿಂತಿದ್ದಳು.

" ಊಟ ಆಯಿತೇ ? " ಎಂದು ಕೇಳಿದ.

" ನೀವು ಬರುವುದಕ್ಕೆ ಮುಂಚೆ ! " ಎಂದು ಉತ್ತರ ಹೇಳಿದಳು. ರಾಜ ಕೋಪದಿಂದ " ಎಷ್ಟು ದಿವಸ ಹೇಳಲಿ–ನನಗಾಗಿ ಕಾಯಬೇಡಾಂತ. ನೀನೊಂದು ಶುದ್ಧ ಗೊಡ್ಡು " ಎಂದು ಬಟ್ಟೆಯನ್ನು ತೆಗೆದುಕೊಂಡು ಸ್ನಾನದ ಮನೆಗೆ ನಡೆದ. ಮೈಮೇಲೆ ಬಿಸಿನೀರು ಬೀಳುತ್ತ ಬೀಳುತ್ತ ಬುದ್ಧಿಯೂ ತಿಳಿಯಾಗುತ್ತ ಬಂತು. ಸ್ನಾನ ಮುಗಿಸಿ ಬಂದು " ಸೀತಾ, ಷರಟು ಕೊಡು. " ಎಂದು ಕೇಳಿದ.

ಸೀತಮ್ಮ ಷರಟು ತಂದುಕೊಟ್ಟಳು. ಅತ್ತು ಕಣ್ಣು ಒರಸಿಕೊಂಡು ಬಂದಿದ್ದುದು ಕಂಡುಬಂತು. ತನ್ನನ್ನು ಕಂಡು ರಾಜನಿಗೆ ಜಿಗುಪ್ಸೆಯಾಯಿತು. ಹೆಂಡತಿಯ ಕೈಹಿಡಿದು " ಗದರಿದ್ದಕ್ಕೆ ಕೋಪ ಬಂತೇ ಸೀತಾ ? " ಎಂದ.

" ಕೋಪವೇಕೆ ?"

" ನೋಡು. ಹೊರಗೆ ಹೋಗುತ್ತೇನೆ. ಎಲ್ಲಾದರೂ ಅಷ್ಟು ಕಾಫಿ ತಿಂಡಿ ಆಗಿರತ್ತೆ. ನೀನು ಸುಮ್ಮನೆ ನನಗೆ ಕಾಯುತ್ತ ಉಪವಾಸವಿದ್ದರೆ ಮನಸ್ಸಿಗೆ ನೆಮ್ಮದಿಯಾಗುತ್ತದೆಯೇ ?"

" ನಿಮ್ಮನ್ನು ಬಿಟ್ಟು ಊಟ ಮಾಡಿದರೆ ಅನ್ನ ಗಂಟಲಿನಲ್ಲಿ ಇಳಿಯುವುದಿಲ್ಲವಲ್ಲಾ—ಏನು ಮಾಡಲಿ. ನೀವು ಹೊತ್ತಿಗೆ ಸರಿಯಾಗಿ ಊಟ ಮಾಡುವುದಿಲ್ಲ. ಹಸಿವಿಲ್ಲ ಎಂದು ಗದರಿಸಿ ಉಪವಾಸ ಮಲಗಿಬಿಡುತ್ತೀರಿ. ಹೀಗಾದರೆ ಆರೋಗ್ಯ ಉಳಿಯುವ ಬಗೆ ಹೇಗೆ ?"

" ಹೇಳಲೇ ?"

" ಹೇಳಿ. "

" ಹತ್ತಿರ ಬಾ............ಹೀಗೆ. "

" ಹೋಗೀಂದ್ರೆ. ನಿಮಗೆ ಸ್ವಲ್ಪವೂ ನಾಚಿಕೆಯಿಲ್ಲ " ಎಂದು ತಟ್ಟೆ ಹಾಕುವುದಕ್ಕೆ ಓಡಿಹೋದಳು.

ಆದರಿಂದ ರಾಜನ ಮನಸ್ಸು ಹಗುರವಾಗಲಿಲ್ಲ. ಮತ್ತಷ್ಟು ಭಾರವಾಯಿತು.

೬

ರಾಜನ ಮೇಲೆ ಅವನ ಸ್ನೇಹಿತರು ಕೋಟಿ ಹೊರಿಸುವುದಕ್ಕೆ ಮೊದಲಾಯಿತು. ದಿವಸಗಟ್ಟಳೆ ಅವನ ಮುಖದರ್ಶನವೇ ಅವರಿಗೆ ಸಿಕ್ಕುತ್ತಿರಲಿಲ್ಲ. ಒಂದು ದಿನ ಸಂಜೆ ಅವನು ಯೂನಿಯನ್ನಿಗೆ ಹೋದಾಗ ಅವನ ಮಾತೇ ನಡೆದಿತ್ತು. ತಿರುಮಲ ಕೇಳಿದ

" ಊರಿನಲ್ಲಿಯೇ ಇದ್ದೀಯಾಪ್ಪ ?"

" ಊರು ಬಿಟ್ಟು ಎಲ್ಲಿಗೆ ಹೋಗಲಿ. "

" ಹಾಗಾದರೆ ರಾಯರು ಈ ಕಡೆ ಪಾದ ಏಕೆ ಬೆಳೆಸಲಿಲ್ಲವೋ ! " ಎಂದು ಅಚ್ಯುತ ಬೆಳಸಿದ.

" ಏನೋ, ಮನೆ ಕೆಲಸವಿತ್ತು. ಪುರಸತ್ತಾಗಲಿಲ್ಲ."

"ಮನೆಗೆ ಬಂದರೂ ಸಿಕ್ಕಲಿಲ್ಲವಲ್ಲಯ್ಯಾ ?" ಎಂದು ಸೀತಾರಾಮು ವಾದ ಹಾಕಿದ.

"ಮನೆ ಕೆಲಸವೆಂದರೆ ಮನೆಯಲ್ಲಿಯೇ ಕೂತಿರುತ್ತಾರೆಯೇ ?"

"ಹಾಗೋ !" ಎಂದು ದೇವದಾಸ ರಾಗ ಎಳೆದ.

ರಾಜನ ಉತ್ತರ ಯಾರಿಗೂ ತೃಪ್ತಿಯನ್ನುಂಟುಮಾಡಲಿಲ್ಲವೆಂಬುದು ಸ್ವತಃಸಿದ್ಧವಾಗಿತ್ತು.

"ನಾಟಕ ಏನು ಮಾಡೋಣ ?" ಎಂದು ಅಚ್ಯುತ ಕೇಳಿದ.

"ಪರೀಕ್ಷೆ ಮುಗಿದು ಹೋಗಲಿ. ಎಲ್ಲರಿಗೂ ಪುರಸತ್ತಾಗತ್ತೆ. ಶಾಕುಂತಲ ಜತೆಗೆ ರೋಮಿಯೋ ಜೂಲಿಯಟ್ ಮತ್ತು ಇನ್ನೊಂದು ನಾಟಕ ಕೂಡಿಸಿಕೊಂಡು ಹುಬ್ಬಳ್ಳಿಯ ವರೆಗೆ ಜಯಭೇರಿ ಹೊಡೆದು ಬರೋಣ."

"ನಿನಗೆ ಯಾಕೋ ಆಸಕ್ತಿ ಕಡಿಮೆಯಾಗುತ್ತಿದೆ ರಾಜ !"

"ಇಲ್ಲ ಸೀತಾರಾಮು. ಒಂದು ಕಡೆಗೆ ಸಂಸಾರ, ಒಂದು ಕಡೆ ಸಂಗೀತದ ಅಭ್ಯಾಸ, ಇವೆರಡರ ಮಧ್ಯೆ ಪುರಸತ್ತೇ ಇಲ್ಲದಹಾಗಾಗಿದೆಯಪ್ಪಾ."

"ಏನಾದರೂ ಈ ನಾಟಕ ಆಡಿಯೇ ತೀರಬೇಕು. ಇಲ್ಲದಿದ್ದರೆ ನಗೆಗೀಡಾಗುತ್ತೇವೆ. ಈಗಲೇ ನಮ್ಮೇಲೆ ಕತ್ತಿಕಠಾರಿ ಹಿರಿದು ಎಷ್ಟೋ ಜನ ನಿಂತಿದ್ದಾರೆ. ಅವರ ಬಾಯಿತೀಟಿಗೆ ಗ್ರಾಸ ಒದಗಿಸಿದ ಹಾಗಾಗತ್ತೆ ನೋಡು" ಎಂದು ಸೀತಾರಾಮು ಎಚ್ಚರಿಕೆ ಕೊಟ್ಟ.

"ಇಲ್ಲಪ್ಪಾ. ಪರೀಕ್ಷೆ ಮುಗಿಯುತ್ತಲೂ ಅದೇ ಕೆಲಸ. ಮಿಕ್ಕ ನಾಟಕಗಳ ಸಿದ್ಧತೆಯೆಲ್ಲಾ ನಾನು ಮಾಡುತ್ತಲೇ ಇದ್ದೇನೆ. ಪರೀಕ್ಷೆ ಮುಗಿದ ಒಂದೆರಡು ವಾರಗಳಲ್ಲಿ ಶಾಕುಂತಲ ಆಡಿ ಬೇರೆ ನಾಟಕ ತೆಗೆದುಕೊಳ್ಳೋಣ."

"ಮಾರ್ಚಿ ಕೊನೆಗೆ ರಾಜನಕುಂಟೆ ಬುಳ್ಳಪ್ಪನ ಕಂಪೆನಿ ತುಲಸೀತೋಟದ ಥಿಯೇಟರಿಗೆ ಬರತ್ತಂತೆ. ಅವನನ್ನು ಹಿಡಿದರೆ ಥಿಯೇಟರು, ಬಟ್ಟೆಬರೆ ಎಲ್ಲಾ ಅನುಕೂಲವೂ ಸಿಕ್ಕತ್ತೆ"

"ಹಾಗೇ ಮಾಡೋಣ" ಎಂದು ಒಪ್ಪಿಕೊಂಡ. ಗೆಳೆಯರೊಂದಿಗೆ ಕೂಡಿ ಮಾತುಕತೆ ಆಡುತ್ತಿದ್ದಾಗಲೂ ಅವನ ಚಿತ್ತ ಬೇರೊಂದೆಡೆಯಲ್ಲಿ

ಸುಳಿದಾಡುತ್ತಿತ್ತು. ಎಷ್ಟು ಪ್ರಯತ್ನಿಸಿದರೂ ಅದು ಸ್ಥಿರವಾಗಿ ಒಂದೆಡೆಯಲ್ಲಿ ನಿಲ್ಲುತ್ತಿರಲಿಲ್ಲ.

ರಾಜನ ಮನಸ್ಸಿನಲ್ಲಿ ದೊಡ್ಡ ಹೋರಾಟವಾರಂಭವಾಯಿತು. ಗುರುಗಳ ಮನೆಯಲ್ಲಿ ಆದ ನೀಲನ ಪರಿಚಯವನ್ನು ಬೆಳೆಯಕೊಟ್ಟದ್ದು ತಪ್ಪಾಯಿತೆಂದು ಭಾವಿಸಿದನು. ರಾತ್ರಿಯೆಲ್ಲಾ ವಿಚಾರದ ಕುಂದಣದಲ್ಲಿ ಮನಸ್ಸನ್ನು ಕರಗಿಸಿದ.

" ಈಗಿನ ಸ್ನೇಹ ಇಲ್ಲಿಗೇ ನಿಲ್ಲುವುದಿಲ್ಲ. ಇದು ಇನ್ನೂ ಮುಂದಕ್ಕೆ ಹೋಗುತ್ತದೆ. "........" ನೀಲನನ್ನು ಸಾಕುವ ಯೋಗ್ಯತೆ ನನಗಿದೆಯೇ ?" ............" ಯೋಗ್ಯತೆ ಇದ್ದರೆ ತಾನೆ ಅಂತಹ ಸಂಬಂಧ ಮಾಡಬಹುದೇ " ............" ಇದರಿಂದ ಸೀತನಿಗೆ ವಂಚನೆ ಮಾಡಿದಂತಾಗುವುದಿಲ್ಲವೇ ? " ............" ಇಲ್ಲ, ನಾಳೆಯಿಂದ ಅವಳ ಮನೆಯ ಕಡೆ ಸುಳಿಯುವುದಿಲ್ಲ " ಎಂದು ನಿರ್ಧರಿಸಿಕೊಂಡ.

ಅಂದು ಸೀತಮ್ಮ ಬಹು ಓರಣವಾಗಿ ಹೆರಳುಹಾಕಿಕೊಂಡು, ಮಲ್ಲಿಗೆಯ ಮೊಗ್ಗನ್ನು ಅಂದವಾಗಿ ಅದಕ್ಕೆ ಮುಡಿಸಿದ್ದಳು. ಹೆಂಡತಿಯನ್ನು ಕತ್ತೆತ್ತಿ ನೋಡಿದ. ಕಣ್ಣು ತುಂಬುವಂತೆ ನೋಡಿದ; " ಚೆಲುವೆ — ದೇವತೆಯಂತೆ ಪರಿಶುದ್ಧೆ— ನಾನೇ ಸರ್ವಸ್ವ ಎಂದು ನಂಬಿರುವವಳು " ಎಂಬ ಸತ್ಯ ಭಾಸವಾಯಿತು. ಉದ್ವೇಗದಿಂದ ಹೆಂಡತಿಯನ್ನು ಭರಸೆಳೆದು ಅಪ್ಪಿದ.

" ಸೀತಾ, ಬೇಗ ಊಟ ಮುಗಿಸು ; ಇವತ್ತು ಸಿನಿಮಾಗೆ ಹೋಗೋಣ."

" ರಾತ್ರಿಯಾಯಿತಲ್ಲಾಂದ್ರೆ. ನಾಳೆ ಹಗಲಾಟಕ್ಕೆ ಹೋದರಾಗದೇ ?"

" ಇಲ್ಲ ಈಗಲೇ ಹೋಗೋಣ. ನನಗೆ ದಯೆಯಿಟ್ಟು ಪ್ರತಿ ಹೇಳಬೇಡ "

ಹೆಂಡತಿಯನ್ನು ಕೂಡಿ ಹೋಗಿ ಸಿನೀಮಾ ನೋಡಿ ಬಂದ. ಮನಸ್ಸು ತುಸು ಹಗುರವಾದಂತಾಯಿತು. ಆ ಸರಿಇರುಳಿನಲ್ಲಿ ಕಲೆಯ ಹಬ್ಬದೂಟ ಉಂಡುಬಂದು ಸೀತಮ್ಮ ಮತ್ತಷ್ಟು ಚೆಲುವೆಯಾಗಿ ಕಾಣುತ್ತಿದ್ದಳು. ಹೆಂಡತಿಯ ಕುರುಳನ್ನು ನೇವರಿಸುತ್ತಾ " ಸುಂದರಿ ! " ಎಂದ, ಅವನ ಮಾತಿನಲ್ಲಿ ಅಪಾರ ಆಸೆ, ಪ್ರೇಮ, ಆತ್ಮ ನಿವೇದನಗಳು ತುಂಬಿದ್ದವು.

ಸೀತಮ್ಮ ಗಂಡನ ಮುಖದ ಮೇಲೆ ಕೈಯಾಡಿಸುತ್ತಾ ಒಮ್ಮೆ ಕಣ್ಣಿಗೆ ಕಣ್ಣು ಕೊಟ್ಟು ನೋಡಿದಳು. ಕಣ್ಣನ್ನು ಕಣ್ಣು ಕೂಡಿತು. ಮನಸ್ಸನ್ನು ಮನಸ್ಸು ಕೂಡಿತು. ಪುಷ್ಪೋದ್ಯಾನದ ಮೇಲೆ ಬೆಳದಿಂಗಳು ಮಾಡಿದಂತಾಯಿತು.

ಎರಡು ದಿವಸ ಗುರುಗಳ ಮನೆಗೂ ಹೋಗಲಿಲ್ಲ. ಮನೆಯಾಯಿತು, ತಾನಾಯಿತು. ಮನೆ ಬಿಟ್ಟರೆ ಯೂನಿಯನ್. ರಾಜನ ಗೆಳೆಯರು ಒಮ್ಮೆಲೇ ಮೂಡಿದ ಈ ಸುಧಾರಣೆಯನ್ನು ಕಂಡು ಆಶ್ಚರ್ಯಪಟ್ಟರು.

ಮನೆಯಲ್ಲಿಯೇ ಕುಳಿತು ರಾಜ ಹಳೆಯ ಪಾಠಗಳನ್ನು ಗಟ್ಟಿಮಾಡಿಕೊಂಡ. ಆಲಾಪನೆಗೆ ರಾಗವನ್ನು ತೆಗೆದುಕೊಂಡರೆ ಅವನ ನಿರೀಕ್ಷಣೆಯನ್ನು ಮೀರಿ ಅದು ಮುಂದೆ ಹೋಗುತ್ತಿತ್ತು. ತಾನೇ ಸಂತೋಷಪಟ್ಟುಕೊಂಡು 'ಭಲೆ' ಎಂದುಕೊಳ್ಳುವನು. ಸೀತಮ್ಮ ಮನೆಗೆಲಸದ ಗಲಾಟೆಯಲ್ಲಿ ಪುರಸತ್ತುಮಾಡಿಕೊಂಡು ಬಾಗಿಲುಮರೆಯಲ್ಲಿ ನಿಂತು ಕದ್ದು ಕದ್ದು ಕೇಳಿ ಸಂತೋಷಿಸುತ್ತಿದ್ದಳು. ಅವನು ಅಭ್ಯಾಸಕ್ಕೆ ಕುಳಿತಿದ್ದಾಗ ಮಧ್ಯೆ ಒಂದು ಕಪ್ಪು ಕಾಫಿ ತಂದಿಟ್ಟಳು. ರಾಜ ಕಾಫಿಯನ್ನು ಕುಡಿದು "ಕುಳಿತುಕೋ ಸೀತಾ" ಎಂದನು.

"ಕೈತುಂಬ ಕೆಲಸ ಇದೆ. ಈಗ ಹೇಗೆ ಕುಳಿತುಕೊಳ್ಳಲಿ."

"ಕೆಲಸ ತಪ್ಪಿದ್ದು ಯಾವಾಗ. ಬಾ ಕುಳಿತುಕೋ."

ಹೆಂಡತಿಯ ಸಲುವಾಗಿ ಒಂದು ಕೀರ್ತನೆಯನ್ನು ಹಾಡಿ ಮುಗಿಸಿದ. ಸೀತಮ್ಮ ಸಂತೋಷದಿಂದ ಕಣ್ಣಂಚಿನಲ್ಲಿ ಕೂಡಿದ ಹನಿಯನ್ನು ಒರಸಿಕೊಂಡಳು.

"ನಾನು ಹಾಡಿದರೆ ನಿನಗೆ ಅಳುವ ಹಾಗಾಗತ್ತ್ಯೇ ಸೀತಾ!"

"ಹೋಗೀಂದ್ರೆ, ದುಃಖದಿಂದ ಯಾರು ಅತ್ತರು."

"ಸಂತೋಷವಾದರೆ ಅಳುತ್ತಾರೇನೇ ಹುಚ್ಚೀ."

"ಅಲ್ಲಾ. ನೀವು ಸಂಗೀತಾಭ್ಯಾಸಕ್ಕೆ ಹೀಗೆ ಕೂತುಬಿಟ್ಟರೆ ಪರೀಕ್ಷೆ ಗತಿ?"

" ದೇವರೇ ಗತಿ. "

" ಮಾವನವರು ಕೋಪಿಸಿಕೊಳ್ಳುತ್ತಾರೋ ಏನೋ ! "

" ನಾನೇನು ಮಾಡಲಿ ಸೀತಾ. ಆ ಪಾಠ ನನ್ನ ತಲೆಗೆ ಹತ್ತಲ್ಲ. ಸಂಗೀತ ಬಿಟ್ಟರೆ ನನಗೆ ಈಗ ಏನೂ ಬೇಕಾಗಿಲ್ಲ."

" ನೀವು ಬಿ. ಎ. ಮಾಡಿ ದೊಡ್ಡ ಚಾಕರಿ ಮಾಡಲೀಂತ ಮಾವನವರು ಲೆಕ್ಕಹಾಕ್ತಿದ್ದಾರೆ. "

" ಅದು ಲೆಕ್ಕದಲ್ಲಿಯೇ ಮುಗಿಯಬೇಕು. "

" ನಿಮ್ಮ ನಿಮ್ಮಲ್ಲಿ ಎಲ್ಲಿ ವಿರಸವಾಗತ್ತೋಂತ ನನಗೆ ಭಯ. "

" ಏನೂ ಭಯಪಡಬೇಡ. ಎಲ್ಲಾ ಸರಿಹೋಗತ್ತೆ " ಎಂದೆದ್ದು ಗುರುಗಳ ಮನೆ ಕಡೆಗೆ ನಡೆದ. ಒಳಗೆ ನೀಲನಿಗೆ ಪಾಠ ಸಾಗಿತ್ತು. ರಾಜನನ್ನು ಗುರುಗಳು ಒಳಕ್ಕೆ ಕರೆದರು.

" ಏನು ವಿದ್ವಾಂಸರು ಅಪರೂಪವಾಗಿ ದಯಮಾಡಿಸಿಬಿಟ್ಟಿರಿ ! "

" ಮನೆಯಲ್ಲಿ ಸ್ವಲ್ಪ ಕೆಲಸವಿತ್ತು. ಬರುವುದಕ್ಕಾಗಲಿಲ್ಲ. "

" ಹೂಂ. ಶ್ರದ್ಧೆ ಕಡಿಮೆಯಾಗ್ತಾ ಬಂತು ! "

" ಇಲ್ಲಾ ಗುರುಗಳೇ. ನಿಜವಾಗಿಯೂ ಮನೆಯಲ್ಲಿ ಕೆಲಸವಿತ್ತು. "

" ಹೀಗೆಲ್ಲಾ ತಪ್ಪಿಸಿಕೊಂಡರೆ ಆಗಲ್ಲಪ್ಪಾ. ಸಂಗೀತ ಕಲಿಯೋದೂಂದ್ರೆ ಗಾಣ ಆಡಿದ ಹಾಗೆ. ಕುತ್ತಿಗೆಯಿಂದ ನೊಗ ತೆಗೆಯಲೇಕೂಡದು. "

" ಹಾಗೇ ಆಗಲಿ. ಇನ್ನುಮೇಲೆ ತಪ್ಪಿಸಿಕೊಳ್ಳಲ್ಲಾ. "

" ಭೈರವಿ ಪ್ರಸ್ತಾರ ಬರೆಸಿದ್ದೀನಿ. ನೀನೂ ಬರೆದುಕೊ ; ನಾನು ಸ್ವಲ್ಪ ಒಳಗೆ ಹೋಗಿಬರುತ್ತೇನೆ " ಎಂದು ಗುರುಗಳು ಒಳಗೆ ಹೋದರು. ಗುರುಗಳಿಗೆ ಅರ್ಧಗಂಟೆಗೊಮ್ಮೆ ಕಾಫಿ ಕುಡಿಯುವ ಚಪಲ. ಕುಳಿತಲ್ಲಿಯೇ ತರಿಸಿ ಕುಡಿಯುವುದೆಂದರೆ ಎದುರಿಗಿದ್ದವರಿಗೂ ಕೊಡಬೇಕಾಗುತ್ತದೆ. ಆದ್ದರಿಂದ ಈ ಗ್ರಹಚಾರವೇ ಬೇಡವೆಂದು ಅವರೇ ಆಗಿಂದಾಗ್ಗೆ ಎದ್ದು ಒಳಗೆ ಹೋಗಿ ಬರುತ್ತಿದ್ದರು. ರಾಜ ನೀಲನ ಪುಸ್ತಕ ತೆಗೆದುಕೊಂಡು ಚಿಟ್ಟೆಸ್ವರ ಬರೆದುಕೊಳ್ಳುವುದಕ್ಕಾರಂಭಿಸಿದ. ನೀಲಾ ಸಣ್ಣ ದನಿಯಿಂದ " ಪಾಠಕ್ಕೆ

ಏಕೆ ಬರಲಿಲ್ಲ?" ಎಂದು ಕೇಳಿದಳು.

"ಹೇಳಿದೆನಲ್ಲಾ—ಮನೆಯಲ್ಲಿ ಕೆಲಸ."

"ನಮ್ಮ ಮನೆಗೂ ಬರಲಿಲ್ಲ."

"ಪುರಸತ್ತಾಗಲಿಲ್ಲ."

"ಬರಬಾರದೂಂತಾಲೇ!"

"ಛಿ! ಛಿ!"

"ಇವತ್ತು ಅಲ್ಲಿಗೇ ಊಟಕ್ಕೆ ಬರಬೇಕು."

"ಮನೆಯಲ್ಲಿ ಹೇಳಿ ಬಂದಿಲ್ಲ."

"ಚಿಂತೆಯಿಲ್ಲ. ಬರುತ್ತೀರಷ್ಟೇ."

ಕತ್ತೆತ್ತಿ ನೋಡಿದ. ಮನಸ್ಸು ಅಲ್ಲೋಲಕಲ್ಲೋಲವಾಯಿತು.

"ಹೂ" ಎಂದ. ಗುರುಗಳೂ ಬಂದರು. ಪಾಠ ಆರಂಭವಾಯಿತು. ನೀಲನ ಪಾಠ ಮುಗಿದಿದ್ದುದರಿಂದ ಅವಳು ಹೊರಟುಬಿಟ್ಟಳು. ರಾಜ ತನ್ನ ಪಾಠ ಮುಗಿಯುತ್ತಲು ಹೊರಟ. ಮನಸ್ಸು ಒಂದೇ ಸಮನೆ ನೀಲನ ಮನೆಯ ಕಡೆ ಸೆಳೆಯುತ್ತಿತ್ತು. ಆದರೆ 'ಬುದ್ಧಿ ಬೇಡ, ಮನೆಗೆ ಹೋಗು' ಎಂದು ಹೇಳುತ್ತಿತ್ತು. ವಿಚಾರ ಮಾಡುತ್ತ ಮಾಡುತ್ತಲೇ ನೀಲನ ಮನೆಗೆ ಬಂದೇಬಿಟ್ಟಿದ್ದ.

ನೀಲ ಮನೆಗೆ ಬಂದವಳು ತಲೆಬಾಚಿಕೊಂಡು, ಹೂಮುಡಿದುಕೊಂಡು, ಮುಖಕ್ಕೆ ತೆಳ್ಳಗೆ ಪೌಡರ್ ಹಚ್ಚಿಕೊಂಡು, ತನ್ನ ದೇಹ, ಬಣ್ಣಗಳಿಗೊಪ್ಪು ವಂತೆ ತೆಳ್ಳನೆಯ ನೀಲಿ ಜಾರ್ಜೆಟ್ ಸೀರೆ ಉಟ್ಟು, ಅದಕ್ಕೆ ಹೊಂದಿಕೊಳ್ಳುವ ಬಿಳಿಯ ಸಿಲ್ಕ್ ಕುಪ್ಪಸ ತೊಟ್ಟು ಸ್ವಾಗತಕ್ಕೆ ಸಿದ್ಧಳಾಗಿದ್ದಳು. ಅವಳನ್ನು ನೋಡಿದೊಡನೆಯೇ ರಾಜ ಚಕಿತನಾದ. ದೇಹಾದ್ಯಂತವೂ ವಿದ್ಯುದಾ ಲಿಂಗನಕ್ಕೆ ಸಿಕ್ಕಿದಂತೆ ಝುಂಝುಂರಿಸಿತು. ದೇಹಕ್ಕೆ ಹತ್ತಿಕೊಂಡಿದ್ದ ಅವಳ ಉಡುಗೆ ತೊಡಿಗೆ, ದೇಹವನ್ನು ತೆಳ್ಳನೆಯ ತೆರೆಹಾಕಿ ಎತ್ತಿ ತೋರಿಸಿದಂತಿತ್ತು. ಹೆಗಲ ಮೇಲೆ ಕೂಡಿದ್ದ ಸೆರಗು, ಸ್ತನಗಳ ಮಾಟವನ್ನು ಎತ್ತಿ ಕಾಣಿಸು ತ್ತಿತ್ತು. ಕುಪ್ಪಸವನ್ನು ಇರಿದು ಹೊರಗೆ ಬರುವಂತೆ ಚೂಚುಕಗಳು ಕಾಣಿಸುತ್ತಿದ್ದವು. ಮಾಟವಾದ ಬಡ ನಡು ಅತ್ತಿತ್ತ ಎರಡು ಬಿಲ್ಲುಗಳನ್ನು

ನಿಲ್ಲಿಸಿದಂತೆ ಕಾಣುತ್ತಿದ್ದವು. ತುಂಬಿದ, ಭಾರವಾದ ನಿತಂಬಗಳು ನಡೆದರೆ ತೂಗುಯ್ಯಾಲೆಯನ್ನು ಜಗ್ಗುತ್ತಿದ್ದವು. ಅವಳ ಒಂದೊಂದು ನಡೆ, ಚಬಕಿನ ನೋಟ, ಎಳೆ ಎಳೆಯಾದ ಮಾತು ರಾಜನ ಕರುಳ ತಂತಿಯನ್ನು ಮಿಡಿಯುತ್ತಿದ್ದವು.

ಊಟಕ್ಕೆ ಬೆಳ್ಳಿಯ ತಾಟು, ಬೆಳ್ಳಿಯ ಬಟ್ಟಲು, ತಂಬಿಗೆ ಸಿದ್ಧವಾಗಿದ್ದವು. ಪಕ್ಕದಲ್ಲಿಯೇ ನೀಲಾ ಊಟಕ್ಕೆ ಕುಳಿತುಕೊಂಡು ಉಪಚರಿಸಿ ರಾಜ ನಾಲ್ಕು ಬಟ್ಟಲು ಹಾಲುಕೀರು ಕುಡಿಯುವಂತೆ ಮಾಡಿದಳು. ರಾಜನಿಗೆ ಮೈಮೇಲೆ ಸ್ಮೃತಿಯೇ ತಪ್ಪಿದಂತಾಗಿತ್ತು. ವಿಸ್ಮೃತಿ ಆವರಿಸಿ ಅವನನ್ನು ಬುದ್ಧಿಶೂನ್ಯನನ್ನಾಗಿ ಮಾಡಿತ್ತು.

ತಾಟಿನಲ್ಲಿಯೇ ಇಬ್ಬರೂ ಕೈತೊಳೆದುಕೊಂಡರು. ವೆರಾಂಡಕ್ಕೆ ಹೋಗುತ್ತಿದ್ದ ರಾಜನನ್ನು "ಒಳಗೇ ಬನ್ನಿ" ಎಂದು ನೀಲಾ ಕರೆದು ತನ್ನ ಶಯನಗೃಹಕ್ಕೆ ಕರೆದೊಯ್ದಳು. ಅವನು ಬೇಡಬೇಡವೆಂದರೂ ಕೇಳದೆ ನಾಲ್ಕು ತೊಳೆ ಮೋಸಂಬಿ ತಿನ್ನಿಸಿದಳು.

ರಾಜನ ಕೈಗೆ ಸೊಗಸಾಗಿ ಬಣ್ಣ ಕಟ್ಟಿದ ಅಡಿಕೆಯನ್ನಿತ್ತು, ಮೈಸೂರಿನ ಬುತ್ತಿಚಿಗುರು ಎಲೆಯನ್ನು ಸೂಕ್ಷ್ಮವಾಗಿ ಹಿಡಿದು, ಅದಕ್ಕೆ ಸುಣ್ಣ ಬಳಿದು ಅವನ ಕೈಗಿತ್ತಳು. ಇಬ್ಬರೂ ತುಟಿಯಿಂದ ಕೆಂಪು ಚೆಲ್ಲುವಷ್ಟು ಎಲೆ ಸವಿದರು. ಮೊದಲೇ ರೂಪಸಿಯಾದ ನೀಲಾ ತಾಂಬೂಲ ರಾಗದಿಂದ ಮತ್ತಷ್ಟು ರೂಪಸಿಯಾಗಿ ಕಾಣುತ್ತಿದ್ದಳು. ಅವಳ ಕಣ್ಣುಗಳಲ್ಲಿ ಸೆಳೆಮಿಂಚು ಮೂಡಿತ್ತು. ಮಧ್ಯೆ ಮಧ್ಯೆ ಮೈ ಕೈ ಮುರಿದುಕೊಂಡು ಅವನ ಸಮೀಪಕ್ಕೆ ಸುಳಿದಿದ್ದಳು. ರಾಜ ಪರವಶನಾಗಿಬಿಟ್ಟಿದ್ದ. ನೀಲಾ ಅರೆನಿದ್ರೆಯಿಂದ ಎಚ್ಚೆತ್ತಂತೆ "ನನ್ನ ಮೇಲೆ ಏಕಿಷ್ಟು ನಿರ್ದಯ?" ಎಂದಳು. ರಾಜ ಅವಳನ್ನು ಕಣ್ಣೆತ್ತಿ ನೋಡಿದ. ಅವನಿಗೆ ಗೋಚರವಾಗದಂತೆ ಕೈಗಳು ಅವಳನ್ನು ಬಳಸಿದವು. ಅವಳ ಕೈಗಳೂ ಅವನ ಕುತ್ತಿಗೆಯನ್ನು ಬಳಸಿದವು.

ಹೊರಗೆ, ತಟ್ಟೆ ತೆಗೆಯಲು ಬಂದಿದ್ದ ನೀಲಾನ ತಾಯಿ ಬಾಗಿಲನ್ನು ಹಾಕಿಕೊಂಡ ಸಪ್ಪಳ ಕೇಳಿಸಿತು.

೭

ಸಂಜೆಗೆ ರಾಜ ಮನೆಗೆ ಬಂದಾಗ ಜೀವಕ್ಕ ಹೇಳಿದ ಸುದ್ದಿಯನ್ನು ಕೇಳಿ ಚಕಿತನಾದ. ಸೀತಮ್ಮನಿಗೆ ಒಂದೇ ಸಮನಾಗಿ ವಮನವಾರಂಭವಾಗಿ ಬಿಟ್ಟಿತ್ತು. ಅದರಿಂದ ಅವಳು ತುಂಬ ಬಳಲಿ ನಿಶ್ಯಕ್ತಳಾಗಿದ್ದಳು.

" ಡಾಕ್ಟರನ್ನು ಕರೆದುಕೊಂಡು ಬರಲೇ ? " ಎಂದು ಕೇಳಿದ. ಜೀವಕ್ಕ ನಕ್ಕು " ಈಗಿನ ಕಾಲದ ಹುಡುಗರಿಗೆ ಸ್ವಲ್ಪವೂ ಬುದ್ಧಿಯಿಲ್ಲ ಅನ್ನುವುದು ಇದಕ್ಕೇ ! "

" ಏಕೆ ಜೀವಕ್ಕ ? "

" ಹುಚ್ಚಾ, ಗೊತ್ತಾಗಲಿಲ್ಲವೇ ! ಸೀತಾ ಬಸುರಿ. "

" ಬಸುರಿ ! " ಆ ಮಾತು ರಾಜನ ಕಿವಿಗಳ ಮೇಲೆ ಸಿಡಿಲು ಬಡಿದಂತಾಯಿತು. ಆಯಾಸದಿಂದ ಮಲಗಿದ್ದ ಹೆಂಡತಿಯ ಪಕ್ಕದಲ್ಲಿ ಕುಳಿತು, ತಲೆಯನ್ನು ಮೃದುವಾಗಿ ನೇವರಿಸುತ್ತಾ " ಸೀತಾ ! " ಎಂದ.

" ಆ ! ಬಂದಿರಾ ? ಊಟ ಆಯಿತೇ ? "

" ಆಯಿತು. "

" ಈಗ ತಾನೇ ಬಂದಿರೇನೋ ? "

" ಹೌದು. ಗುರುಗಳು ಬಿಡದೆ ಮನೆಯಲ್ಲಿ ಊಟಕ್ಕೆ ಎಬ್ಬಿಸಿದರು. "

" ನಿಜವಾಗಿ ಆಯಿತೇ ? "

" ಆಯಿತಪ್ಪಾ. ಯೋಚಿಸ ಬೇಡ. ತುಂಬ ಸುಸ್ತಾಗಿದೆಯೋ ? "

" ಏನೂ ಇಲ್ಲ. ಮನಸ್ಸಿಗೆ ತುಂಬ ಸಂತೋಷವಾಗಿದೆ. "

" ಏಕೆ ? "

" ಜೀವಕ್ಕ ಹೇಳಲಿಲ್ಲವೇ ? "

" ಹೇಳಿದಳು. "

" ಸ್ವಾಮಿ, ಇವತ್ತು ನನ್ನ ಆಸೆ ಈಡೇರಿತು. "

" ಮಕ್ಕಳಾಗಲಿ ಎಂದು ಅಷ್ಟು ಬಯಸುತ್ತಿದ್ದೆಯಾ ? "

" ಹೂ ಎಂದರೆ ನಾಚಿಕೆ ಇಲ್ಲದವಳು ಎನ್ನುತ್ತೀರೇನೋ ! "

" ಯಾಕನ್ನಲಿ. ನಿನ್ನ ಸಂತೋಷವೇ ನನ್ನ ಸಂತೋಷ. "

" ನಿಮಗೆ ಕೋಪವೇ ? "

" ಏಕೆ ? "

" ಇದೂ ಒಂದು ಎಂದು. "

" ಇಲ್ಲಾ ಚಿನ್ನಾ. ನಮ್ಮ ಪ್ರೇಮದ ಫಲ. ಅದನ್ನು ನಿರಾಕರಿಸಲೇ ! "

ಸೀತಮ್ಮ ಸಮಾಧಾನದಿಂದ ಉಸಿರುಬಿಟ್ಟಳು.

ರಾಜ ದಿಕ್ಕುಗೆಟ್ಟವನಂತೆ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಕುಳಿತುಕೊಂಡ. ಕಣ್ಣಲ್ಲಿ ಧಾರೆಧಾರೆಯಾಗಿ ನೀರು. ಮನಸ್ಸು ಅವ್ಯಕ್ತವಾದ ಪ್ರಬಲ ವೇದನೆಗೆ ಸಿಕ್ಕಿಬಿಟ್ಟಿತ್ತು. ತನ್ನನ್ನು ಥಳಿಸಿಕೊಳ್ಳುವಷ್ಟು ತನ್ನ ಮೇಲೇ ಕೋಪ. ಯಾವ ಮಾರ್ಗವನ್ನು ನಿರ್ದೇಶಿಸಿಕೊಳ್ಳುವುದಕ್ಕೂ ಸಾಧ್ಯವಾಗದಷ್ಟು ಘೋರಾಂಧಕಾರ ಕವಿದುಬಿಟ್ಟಿತ್ತು. ಅವನ ಬಾಳಪಕ್ಷಿ ಅನಂತ ಕತ್ತಲೆಯ ಕೋಟಲೆಗೆ ಸಿಕ್ಕಿ ತೊಳಲಾಡುತಿತ್ತು. ಮಂತ್ರ ಮುಗ್ಧನಂತೆ, ಕಿಟಕಿಯಾಚೆ ಕಾಣುತ್ತಿದ್ದ ನೀಲಾಕಾಶವನ್ನು ದಿಟ್ಟಿಸಿ ನೋಡುತ್ತ ಕುಳಿತುಬಿಟ್ಟ. ಅದು ಅವನಿಗೆ ಶೂನ್ಯತೆಯ ಸಂಕೇತದಂತೆ ಕಾಣಬಂತು.

ಜೀವಕ್ಕನ ಬಾಯಲ್ಲಿ ಸುದ್ದಿ ಕೇಳಿ ತಂದೆ ಹಿಗ್ಗಿದರು. ವಂಶೋದ್ಧಾರಕ ಒಬ್ಬ ಮೊಮ್ಮಗ ಹುಟ್ಟಿದರೆ ಸಾಕು ಎಂದರು. ಜೀವಕ್ಕ " ಸದ್ಯ ಹೆಣ್ಣು ಮಗಳು ಸುರಕ್ಷಿತವಾಗಿ ಮೈ ಕಳೆದರೆ ಸಾಕು. ಹೆಣ್ಣೋ ಗಂಡೋ ಯಾವದೋ ಒಂದು " ಎಂದಳು.

" ರಾಜ ಮನೆಗೆ ಬಂದಿದ್ದಾನೆಯೋ ? "

" ಆಗಲೇ ಬಂದ. ರೂಮಿನಲ್ಲಿದ್ದಾನೆ. "

ತಂದೆ ರಾಜನನ್ನು ಕರೆದು " ಸ್ವಲ್ಪ ಮನೆಕಡೆ ಗಮನಕೊಡಪ್ಪಾ. ಸೀತಮ್ಮ ಈಗ ಒಂದು ಜೀವವಲ್ಲ, ಎರಡು "

" ಆಗಲಪ್ಪಾ. "

"ಅಮಲ್ದಾರರ ಜತೆ ನಾನು ನಾಳೆ ಬೆಳಿಗ್ಗೆ ಮೈಸೂರಿಗೆ ಹೋಗ ಬೇಕಾಗಿದೆ."

"ಏನು ಸಮಾಚಾರ ?"

"ಅವರು ಮಗಳಿಗೆ ಒಂದು ಗಂಡು ನೋಡ್ತಾ ಇದ್ದಾರೆ. ನಮ್ಮ ಕ್ಯಾತನಹಳ್ಳಿ ವೆಂಕಟಸುಬ್ಬಯ್ಯನ ಮಗನಿಗೆ ಕೊಡಬೇಕೂಂತ ಇಚ್ಛೆ. ಈ ಕಡೆ ವಯಸ್ಸಿನಲ್ಲಿ ಹಿರಿಯ, ಆ ಕಡೆ ವೆಂಕಟಸುಬ್ಬೂ ಸ್ನೇಹಿತ—ಇದು ತಿಳಿದು ನೀನು ಬರಲೇಬೇಕೂಂತ ಅಮಲ್ದಾರರ ಹಟ. ದೊಡ್ಡವರು ಹೇಳಿದ ಮೇಲೆ ಆಗಲ್ಲ ಅನ್ನೋದಿಕ್ಕಾಗತ್ತ್ಯೆ. ತಾಪೇದಾರಿಯಪ್ಪ ತಾಪೇದಾರಿ."

"ಬರುವುದು ?"

"ಮೂರು ನಾಲ್ಕು ದಿವಸವಾಗಬಹುದು. ನೀನು ಧೈರ್ಯವಾಗಿ ಹೋಗಿಬರಲೋ."

"ಹೋಗಿ ಬಾಪ್ಪ."

ಬೆಳಿಗ್ಗೆ ಆಚಾರ್ಯರ ಪ್ರಯಾಣದ ಏರ್ಪಾಡಾಯಿತು. ರಾಜ ಬೇಗ ಎದ್ದು ತಂದೆಗೆ ಗಂಟೂ ಮೂಟೆ ಕಟ್ಟಿಕೊಟ್ಟ. ಜೀವಕ್ಕ ಸ್ನಾನಕ್ಕೆ ನೀರು ಕಾಸಿ, ಕಾಫಿ ಉಪ್ಪಿಟ್ಟು ಮಾಡಿಟ್ಟರು. ಆಚಾರ್ಯರು ಮಗನ ಮೇಲೆ ಸಂಸಾರದ ಭಾರ ಹಾಕಿ ಮೈಸೂರಿಗೆ ಪ್ರಯಾಣ ಬೆಳಸಿದರು.

ತಂದೆ ಊರಿಗೆ ಬರುವವರೆಗೆ ಮನೆ ಬಿಟ್ಟು ಕದಲಕೂಡದೆಂದು ರಾಜಾ ನಿರ್ಧರಿಸಿದ. ಮಾಡುವುದಕ್ಕೆ ಏನೂ ತೋರದೆ "ಹ್ಯಾಂಪ್ಲೆಟ್" ನಾಟಕ ವನ್ನು ಕನ್ನಡದಲ್ಲಿ ಅನುವಾದಮಾಡುವುದಕ್ಕೆ ಕುಳಿತ. ಅದರಿಂದ ಹೊತ್ತೂ ಮರೆಯಿತು. ಮನಸ್ಸಿನ ದಾಹವೂ ಕಡಿಮೆಯಾಯಿತು. ಗುರುಗಳ ಮನೆಗೆ ಪಾಠಕ್ಕೆ ಹೋಗುವುದೂ ನೆಪ್ಪಿನಿಂದ ಹಾರಿಹೋಯಿತು. ಗಂಡ ಬೆಳಿಗ್ಗೆ ಯಿಂದ ಮನೆ ಬಿಟ್ಟು ಹೋಗದಿರುವುದನ್ನು ಕಂಡು ಸೀತಮ್ಮ ಇಂದೇ ಸುದಿನ ವೆಂದು ಭಾವಿಸಿಕೊಂಡಳು.

ರಾಜಾ ಕನ್ನಡದಲ್ಲಿ ಸುರಿತವನಲ್ಲ ಈಚೆಗೆ ನಾಟಕದ ಗೀಳು ಹಿಡಿದ ಮೇಲೆ ಕನ್ನಡದ ಕಡೆ ಲಕ್ಷ್ಯ ಹೋಗಿತ್ತು. ಕನ್ನಡ ಪುಸ್ತಕಗಳನ್ನು—ನಾಟಕ ಪುಸ್ತಕಗಳನ್ನಾದರೂ ಓದುವ ಹವ್ಯಾಸ ಹುಟ್ಟಿತ್ತು. ಪ್ರತಿಯೊಂದು

ಹೆಚ್ಚಿಗೂ ತನ್ನ ಪಾಂಡಿತ್ಯ, ಭಾಷಾ ಭಂಡಾರ ಷೇಕ್ಸ್‌ಪಿಯರ್ ಕವಿಯನ್ನು ಕನ್ನಡಿಸಬೇಕಾದರೆ ಎಷ್ಟು ಸಾಲದೆಂಬ ಅರಿವಾಗುತ್ತ ಬಂತು. ಮುಂದೆ, ತನ್ನ ಜೀವಮಾನವನ್ನೆಲ್ಲಾ ಕನ್ನಡ ರಂಗಭೂಮಿಗೆ ಮೀಸಲುಮಾಡಬೇಕೆಂದು ಯೋಚಿಸಿದ್ದುದರಿಂದ, ಕನ್ನಡವನ್ನು ಹೆಚ್ಚು ಅಭ್ಯಾಸ ಮಾಡಿಕೊಳ್ಳುವ ಕಡೆಗೆ ಲಕ್ಷ್ಯ ಹೋಯಿತು.

ಅನುವಾದ ಕಾರ್ಯಕ್ಕೆ ಅವನ ನೆರವಿಗಿದ್ದುದು ಕ್ರಿಸ್ತಾನುಜವತ್ಸರ ಮತ್ತು ಜೀಗ್ಲರವರ ಇಂಗ್ಲಿಷ್-ಕನ್ನಡ ನಿಘಂಟುಗಳು. ಮಾತಿಗೆ ಮಾತು ಜೋಡಿಸಿ ಭಾಷಾಂತರವನ್ನು ನಡೆಸಿದ್ದನು. ಒಟ್ಟಿನಲ್ಲಿ ಓದಿದಾಗ ಅವು ಮಹಾಕವಿಯ ಭಾವನೆಯ ಒಂದಂಶವನ್ನು ತಂದಿಲ್ಲವೆಂದೆನಿಸುತ್ತಿತ್ತು. ಒಂದೆರಡು ಬಾರಿ ಬರೆದಿದ್ದುದನ್ನು ಹರಿದೊಗೆದು ಬೇಸರದಿಂದ ಎದ್ದು ಹೊರಗೆ ಬಂದ. ಆದರೆ ಅದಾವುದೋ ಶಕ್ತಿ ಅವನನ್ನು ಮತ್ತೆ ಮೇಜಿನ ಮುಂದೆ ಕೂಡಿಸಿ ಭಾಷಾಂತರ ಕೆಲಸವನ್ನು ಹಚ್ಚಿತ್ತು. ಅಂತೂ ಭಾಷಾಂತರ ಮುಗಿಸಿ, ಯಾರಿಗಾದರೂ ಸರಿಯಾದ ಪಂಡಿತರಿಗೆ ತೋರಿಸಿ ತಿದ್ದಿಸಿ ಮುಂದಕ್ಕೆ ಉಪಯೋಗಿಸಿಕೊಳ್ಳುವದೆಂದು ನಿಶ್ಚಯಮಾಡಿದನು.

ಅಪರೂಪಕ್ಕೆ ಸೋದರಳಿಯ ಮನೆಯಲ್ಲಿದ್ದಾನೆಂದು ಜೀವಕ್ಕ ಮಧ್ಯಾಹ್ನಕ್ಕೆ ತೇಂಗೂಳಲು, ರವೆವುಂಡೆ ಮಾಡಿ ಕಾಫಿಯೊಂದಿಗೆ ತಂದು ಕೊಟ್ಟರು. ತಿಂಡಿಯನ್ನು ಮುಗಿಸಿ ಮತ್ತೆ ತನ್ನ ಕೆಲಸದಲ್ಲಿ ನಿರತನಾದ.

ಸಂಜೆ ಏಳು ಗಂಟೆ ಇರಬಹುದು. ಮುಸುಕುಮುಸುಕಾಗಿ ಕತ್ತಲೆ ಕವಿಯುವುದಕ್ಕೆ ಆರಂಭಿಸಿತ್ತು. ತುಂತುರು ಮಳೆ ಬೇರೆ ಬೀಳುತ್ತಿತ್ತು. ಬಾಗಿಲು ತಟ್ಟಿದ ಶಬ್ದ ಕೇಳಿ ಬಂತು. ಜೀವಕ್ಕ ಒಳಗಿನಿಂದಲೇ,

" ನೋಡು ರಾಜಾ, ಯಾರೋ ಬಾಗಿಲು ತಟ್ಟುತ್ತಿದ್ದಾರೆ " ಎಂದಳು. ರಾಜ ಎದ್ದು ಹೋಗಿ ಬಾಗಿಲು ತೆಗೆದ. ಅವನ ಎದೆ ಹಾರಿತು. ಗುರುಗಳ ಆಳು ನಿಂಗಾ—ಕೈಯಲ್ಲಿ ಒಂದು ಚೀಟಿ ಹಿಡಿದು ನಿಂತಿದ್ದ.

" ಏನು ಬಂದೆ ನಿಂಗಾ ? "

" ಕಾಗಜ ಕಳಿಸವ್ರೆ ಬುದ್ದಿ "

ಕಾಗದ ಒಡೆದು ನೋಡಿಕೊಂಡ. ಗುರುಗಳದ್ದಲ್ಲ ನೀಲನದು.

“ ದೇವರಿಗೆ ಸಮಾನರಾದ ಹೃದಯೇಶ್ವರರೇ,

ಎಷ್ಟೇ ಕೆಲಸವಿದ್ದರೂ ಕೂಡಲೆ ಮನೆಗೆ ಬಂದು ಹೋಗಬೇಕು. ಖಂಡಿತ ನಿಮ್ಮನ್ನು ಈಗಲೇ ನೋಡಬೇಕಾಗಿದೆ.

ನಿಮ್ಮ ದಾಸಿ “ ನೀಲಾ ”

ಏನು, ಎಂತು ವಿಚಾರಿಸಬೇಕೆಂದು ಕುತೂಹಲವಾಯಿತು. ಮನೆಯ ಮುಂದೆ ಏತಕ್ಕೆ ಪಂಚಾಯಿತಿ. ಎಲ್ಲಿಯಾದರೂ ಸೀತನ ಕಿವಿಗೆ ಬಿದ್ದೀತು ಎಂದು ಹೆದರಿ “ ನೀನು ಹೋಗು, ನಾನು ಬರುತ್ತೇನೆ ” ಎಂದೆ.

“ ಜತೇಲೇ ಕರ್ಕೊಂಡು ಬಾ ಅಂದರು ಬುದ್ಧಿ ”

“ ಹೋಗು, ನಿನ್ನ ಹಿಂದೆನೇ ಬರ್ತೀನಿ ” ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟ.

ಮನಸ್ಸಿನಲ್ಲಿ ಗಾಬರಿ. ಏನಾಗಿರಬಹುದು. ಏಕೆ ಹೀಗೆ ಅವಸರದಲ್ಲಿ ಬರಹೇಳಿದ್ದಾಳೆ. ಏನಾದರೂ ಆಗಲಿ ಹೋಗಿ ನೋಡಿಕೊಂಡು ಬರೋಣ ವೆಂದು ಅಂಗಿ ಧರಿಸಿ “ ಸ್ವಲ್ಪ ಹೊರಗೆ ಹೋಗಿ ಬರ್ತೀನಿ ಸೀತಾ ” ಎಂದ.

“ ಯಾರದು ಕಾಗದ ರಾಜಣ್ಣ ” ಎಂದು ಜೀವಕ್ಕ ಕೇಳಿದಳು.

“ ನನ್ನ ಸ್ನೇಹಿತ ಅಚ್ಯುತ ಕಳಿಸಿದ್ದಾನೆ. ಯಾಕೊ ಗಾಬರಿಯಾಗಿ ಹೇಳಿಕಳಿಸಿದ್ದಾನೆ. ”

“ ಹೋಗಪ್ಪಾ ನೋಡಿಕೊಂಡು ಬಾ. ಬೇಗ ಬಂದು ಬಿಡು. ”

“ ಬೇಗ ಬನ್ನಿ ” ಎಂದು ಸೀತಮ್ಮ ನುಡಿದಳು.

“ ಆಗಲಿ ” ಎಂದವನೇ ಅಲ್ಲಿಂದ ಹೊರಟ.

ದಾರಿಯಲ್ಲಿ ವಿಚಾರ ಪರಂಪರೆ. ನೀಲನಿಗೆ ತಕ್ಷಣ ಕಾಯಿಲೆಯಾಗಿರ ಬಹುದೇ............ಅಥವಾ ತಾಯಿ ಮಗಳಿಗೆ ವ್ಯಾಜ್ಯವಾಗಿರಬಹುದೇ.......... ಅಥವಾ ಗುರುಗಳು ನಾನು ಪಾಠಕ್ಕೆ ಹೋಗಲಿಲ್ಲವೆಂದು ಕೋಪದಲ್ಲಿ ಏನಾದರೂ ಅಂದಿರಬಹುದೇ, ಎಂದು ತರ್ಕಿಸಿಕೊಂಡೇ ನೀಲನ ಮನೆ ಸೇರಿದ. ನೀಲಾ ಎಂದಿಗಿಂತಲೂ ಹೆಚ್ಚಾಗಿ ಅಲಂಕರಿಸಿಕೊಂಡು, ಸಿಸ್ತಾಗಿ ಬಂದು ರಾಜನನ್ನು ಸ್ವಾಗತಿಸಿದಳು. ರಾಜ ಗಾಬರಿಯಿಂದಲೇ “ ಏನು ನೀಲಾ ಸಮಾಚಾರ, ಇಷ್ಟು ಅವಸರದಲ್ಲಿ ಬರಹೇಳಿದ್ದು ? ” ಎಂದು ಕೇಳಿದ.

“ ಬೆಳಗ್ಗೆ ಪಾಠಕ್ಕೇಕೆ ಬರಲಿಲ್ಲ ನೀವು ? ”

" ಅದಿರಲಿ ನಿನ್ನ ವಿಷಯ ಹೇಳು."

" ಗಾಬರಿಗೊಂಡಂತಿದೆ. ಸಮಾಧಾನ ತಂದುಕೊಳ್ಳಿ. ಪ್ರಮಾದವೇನೂ ಆಗಿಲ್ಲ."

" ಸದ್ಯ—ನನ್ನ ಎದೆಗುಂಡಿಗೆ ಹಾರೇ ಹೋಯಿತು."

" ಪಾಠಕ್ಕೆ ಏಕೆ ಬರಲಿಲ್ಲ."

" ಮನೆಯಲ್ಲಿ ವೈಗೆ ಸರಿಯಿರಲಿಲ್ಲ—ಅದಕ್ಕೋಸ್ಕರ. ಹೇಳು ಪುಣ್ಯಾತ್ಗಿತ್ತಿ, ಏಕೆ ಇಂತಹ ಗಾಬರಿ ಹುಟ್ಟಿಸಿದೆ."

" ನಿಮಗೆಲ್ಲಾ ಗೊತ್ತೆ ಇದೆಯಲ್ಲಾ."

" ಯಾವದು ?"

" ಅವರದು ?"

" ನಿಮ್ಮ ಯಜಮಾನರು."

ನೀಲನ ಸಂಸಾರ ಒಬ್ಬ ಶ್ರೀಮಂತ ನಡಸುತ್ತಿದ್ದನೆಂದು ರಾಜನಿಗೆ ಗೊತ್ತಿತ್ತು. ಅವಳೇ ಅದನ್ನು ಒಂದು ದಿವಸ ಹೇಳಿದ್ದಳು.

" ಏನು ಅವರ ವಿಷಯ?"

" ಅವರು ಊರಿನಲ್ಲಿಲ್ಲ."

" ಅದಕ್ಕೆ ಇಷ್ಟು ರಾಮಾಯಣ ಮಾಡಬೇಕೇ?"

" ನಿಮಗರ್ಥವಾಗಲಿಲ. ನಾನೇನು ತಲೆ ಚಚ್ಚಿಕೊಳ್ಳಲೇ?"

" ತಲೆ ಚಚ್ಚಿಕೊಳ್ಳಬೇಡ. ಇರೋ ವಿಷಯ ಹೇಳು."

" ಎರಡು ಮೂರು ದಿವಸವಾದರೂ ನಾವಿಬ್ಬರೂ ಸಂತೋಷವಾಗಿರಬಹುದೆಂದು ಹೇಳಿ ಕಳಿಸಿದೆ."

" ಹಾಗೋ!"

" ನಿಮಗೆ ಬೇಡವಾಗಿತ್ತೇನೋ?"

ಬೆಳಿಗ್ಗೆ ರಾಜನಿಗೆ ಬೇಡವೇ ಆಗಿತ್ತು. ಆದರೆ ನೀಲನನ್ನು ಕಂಡ ಕೂಡಲೆ ವಿಚಾರ ಬದಲಾಯಿಸಿತು. ಹಿಂದಿನದೆಲ್ಲಾ ಮರೆತು ಹೋಯಿತು. ನಿರ್ಧಾರ, ಹ್ಯಾಂಮ್ಲೆಟ್ ನಾಟಕ ಎಲ್ಲಾ ಗಾಳಿಗೆ ತೂರಿಹೋದವು. ತಾನಿದ್ದ ವಾತಾವರಣದಲ್ಲಿ ಚಿತ್ತವನ್ನು ತೇಲಿಬಿಟ್ಟ. ಅವನ ಕಣ್ಣುಗಳಿಗೆ ಜಗತ್ತೇ ಅಳಿಸಿಹೋಯಿತು. ಜಗತ್ತಿನ ಜೀವಿಗಳೆಲ್ಲಾ ಕನಸಿನ ಮೂರ್ತಿಗ

ಳಾದರು. ಒಂದೇ ಸತ್ಯ, ಒಂದೇ ನಿತ್ಯ, ಒಂದೇ ಧ್ರುವ — ನೀಲಾ. ಅವಳ ನಗೆ, ನೋಟ, ಮಾತುಕತೆ, ಬಿಂಕ ಬೆಡಗು, ವೈಯಾರ ಒನಪು. ರಾಜನ ವಿಚಾರಸರಣಿ ಕೂಡಲೆ ಬದಲಾಯಿಸಿತು. "ಇರುವುದು ನಾಲ್ಕುದಿನ. ಬಾಳು ಗೋಳಿನ ಕಂತೆ. ಇರುವಷ್ಟು ದಿನ ಏತಕ್ಕೆ ಸುಖಪಡಬಾರದು. ತನ್ನನ್ನು ಅರಸಿ, ಬಯಸಿ ಈ ರೂಪರಾಣಿ ತನ್ನ ಒಲವನ್ನು ಧಾರೆಯೆರೆಯು ತ್ತಿದ್ದಾಳೆ. ಅವಳ ಸಂಗದಲ್ಲಿ ತನ್ನ ದೇಹ, ದಾಹ ತಣಿಯುತ್ತದೆ. ತಾನಾಗಿ ಒದಗಿಬಂದ ಶ್ರೀಯನ್ನು ಧಿಕ್ಕರಿಸಲೇ?"

ನೀಲನಂತೂ ರಾಜನಲ್ಲಿ ಅನುರಕ್ತೆ ಮಾತ್ರವಲ್ಲ, ಮೋಹತಪ್ತೆ ಯಾಗಿದ್ದಳು. ಮನಸ್ಸು ಒಲ್ಲದ ಜೀವಿಗಳಿಗೆ ಪ್ರೀತಿಯನ್ನು ನಟಿಸಿ, ದೇಹವನ್ನು ಒಪ್ಪಿಸಿ ಒಪ್ಪಿಸಿ ಅವಳಿಗೆ ಸಾಕಾಗಿತ್ತು. ನೀಲಾ ಯುವತಿ. ತಾರುಣ್ಯ ಅವಳ ಅಂಗಾಂಗಗಳಲ್ಲಿ ಮಿಡಿಯುತ್ತಿತ್ತು. ತಾರುಣ್ಯದ ಅನಂತ ಬಯಕೆಗಳು ತೃಪ್ತವಾಗದೆ ಮತ್ತಷ್ಟು ಉಗ್ರವಾಗಿ ಪ್ರಜ್ವಲಿಸುತ್ತಿದ್ದವು. ಜತೆಗೆ ರಸಿಕಳು. ಇನಿಯನಲ್ಲಿ ಅಂದಚೆಂದವನ್ನು ಬಯಸುವಂತೆ, ಕಲೆ, ರಾಗವನ್ನೂ ಅವಳು ಬಯಸುತ್ತಿದ್ದಳು. ಅವಳ ಜೀವನ ಅತೃಪ್ತ ಆಶಯಗಳ ಸಂತೆಯಾಗಿತ್ತು. ತನ್ನ ಬಂಗಾರದಂತಹ ದೇಹದ ಸೊಬಗುಂಡ ಇನಿಯ ಪ್ರತಿಯಾಗಿ ತನಗೂ ಅದೇ ಸಂತುಷ್ಟಿಯನ್ನು ಕೊಡಬೇಕೆಂದು ಅವಳು ಬಯಸುತ್ತಿದ್ದಳು.

ಇದ್ದ ಯಜಮಾನ ಮುಗ್ಧ, ಶ್ರೀಮಂತ. ಪಶುವಿನಂತಹ ಪ್ರವೃತ್ತಿ, "ಹಾಡಲೇ" ಎಂದು ಕೇಳಿದರೆ, "ಎಲಡಿಕೆ ಮಡಿಸಿಕೊಡು" ಎಂದು ಹೇಳುತ್ತಿದ್ದ. ಸುಂದರವಾದ ಹೊಸ ಸೀರೆಯುಟ್ಟು "ಹೇಗಿದೆ" ಎಂದು ಕೇಳಿದರೆ "ಸೀರೆಯ ಬೆಲೆಯೆಷ್ಟು" ಎಂದು ಕೇಳುತ್ತಿದ್ದ. ಸ್ಮಶಾನದಲ್ಲಿ ಅರ್ಧ ಕಾಲೂರಿದ ಪ್ರಾಣಿಯೊಂದಿಗೆ ತಾನು ಶೃಂಗಾರಪಡಬೇಕಾಗಿತ್ತು. ಉಪ್ಪಿನ ಕಾಗದದಂತಿದ್ದ ಅವನ ಗಲ್ಲಕ್ಕೆ ತನ್ನ ಕುಸುಮ ಕೋಮಲ ಗಲ್ಲವನ್ನು ಕೂಡಿಸಬೇಕಾಗಿತ್ತು. ಅವನ ಕೇಳಿಯನ್ನು ಸಹಿಸಿಕೊಂಡು, ಸುಖಪಡುತ್ತಿದ್ದೇನೆಂದು ತೋರಿಸಿಕೊಳ್ಳಬೇಕಾಗಿತ್ತು.

ಆದರೆ ಆ ಬಾಳನ್ನು ಸಹಿಸದೆ ಈಗಿದ್ದಷ್ಟು ನೆಮ್ಮದಿಯನ್ನೂ ಅನುಭವಿಸುವುದಕ್ಕಾಗುತ್ತಿರಲಿಲ್ಲ. ಅನುಕೂಲವಾಗ ಮನೆ, ರುಚಿರುಚಿಯಾದ ಊಟ ತಿಂಡಿ, ಕಣ್ಣಿಗೊಪ್ಪುವ ಉಡಿಗೆತೊಡಿಗೆ, ಜತೆಗೆ ಗುರುಗಳಿಗೆ ಸಂಗೀತ

ಕಲಿಸುವುದಕ್ಕೆ ಹಿಡಿಹಿಡಿ ಹಣ ಶ್ರೀಮಂತ ಧಾರಾಳವಾಗಿ ಒದಗಿಸುತ್ತಿದ್ದ. ಪ್ರೇಮಕ್ಕಾಗಿ ಅವೆಲ್ಲವನ್ನೂ ತ್ಯಾಗಮಾಡಿ ದಾರಿದ್ರ್ಯವನ್ನಪ್ಪುವಷ್ಟು ಅವಳಿಗೆ ಮನೋದಾರ್ಢ್ಯವಿರಲಿಲ್ಲ. ಆದರೆ ನೆಮ್ಮದಿಯ ಸಲುವಾಗಿ ತನ್ನ ಬಾಳಿಗೆ ಅಕಾಲಿಕ ಮುಪ್ಪನ್ನು ತಂದುಕೊಳ್ಳುವುದಕ್ಕೂ ಅವಳ ಮನಸೊಪ್ಪದು.

ರಾಜನ ಪರಿಚಯವಾದದ್ದು ಅವಳ ಜೀವನದ ಒಂದು ದೊಡ್ಡ ಸಮಸ್ಯೆ ನೀಗಿದಂತಾಗಿತ್ತು. ರಾಜನ ಸುಂದರ ವದನ, ಗಭೀರವಾದ ಎತ್ತರ, ರಾಜ ಠೀವಿಯಿಂದ ಕೂಡಿದ ಮಾತುಕತೆ, ಸಂಸ್ಕೃತಿಯೇ ಮೈವೆತ್ತು ಬಂದಂತಿತ್ತು. ನೀಲಾ ತನ್ನ ಸ್ವಪ್ನಸೃಷ್ಟಿಯನ್ನು ಸೇರಿಸಿ ಅವನಲ್ಲಿಲ್ಲದ ಗುಣಗಳನ್ನು ಕಂಡುಕೊಂಡಿದ್ದಳು. ಅವನ ಮೋಹಕ ಕಂಠಕ್ಕೆ ಮಾರುಹೋಗಿದ್ದಳು. ಪರಿಚಯದ ಪರಿಣಾಮ ಆತಿಥ್ಯದಲ್ಲಿ, ಆತಿಥ್ಯದ ಮುಕ್ತಾಯ ಸ್ನೇಹದಲ್ಲಿ, ಸ್ನೇಹದ ಗಮ್ಯ ಪ್ರಣಯದಲ್ಲಿ ಕೊನೆಗಂಡಿತ್ತು.

ಆ ದಿನ-ರಾಜನ ಸಖ್ಯವಾದ ಸುದಿನ ಅವಳ ಬಾಳುವೆಯ ಯುಗಾದಿಯಾಗಿತ್ತು. ಅವಳ ಹಲವು ವರ್ಷಗಳ ಹಂಬಲ, ಹಲವು ಘೋರ ದಿನಗಳ ಉಗ್ರ ತಪಸ್ಸು ಸಿದ್ಧಿಸಿತ್ತು. ಅನಂಗನ ಪವಾಡ ಅವಳ ಬಾಳನ್ನು, ದೇಹವನ್ನು ಧನ್ಯಮಾಡಿತ್ತು. ರಾಜನ ಹೆಸರು ಹೇಳಿದರೆ ಸಾಕು ಅವಳ ದೇಹಾದ್ಯಂತವೂ ಕಂಪಿಸುತ್ತಿತ್ತು. ಚಿತ್ತದಲ್ಲಿ ಚಾಪಲ್ಯ, ಕಣ್ಣಿನಲ್ಲಿ ಚಾಂಚಲ್ಯ ಮಿನುಗುತ್ತಿದ್ದವು.

ಇಬ್ಬರನ್ನೂ ಅನಂಗನ ಪುಷ್ಪಪಾಶ ಒಂದುಗೂಡಿಸಿತ್ತು. ಪರಸ್ಪರ ಸಂಗದಲ್ಲಿ ಅವರು ತಮ್ಮ ತಮ್ಮ ವಿಶ್ವಗಳನ್ನು ಮರೆತುಬಿಟ್ಟರು. ಹಗಲು ರಾತ್ರಿಯಾಗುತ್ತಿತ್ತು. ಇರುಳು ಇರುಳಾಗಿಯೇ ಇರಬೇಕೆಂದು ಅವರು ಬಯಸುತ್ತಿದ್ದುದರಿಂದ ಅದು ಹಾಗೆಯೇ ಉಳಿಯುತ್ತಿತ್ತು. ಕತ್ತಲೆಯ ರಾತ್ರಿಯಾದರೆ ಅದು ತನ್ನ ಪ್ರೇಯಸಿಯ ಕಣ್ಣ ಕಪ್ಪೆಂದು ರಾಜ ಭಾವಿಸುತ್ತಿದ್ದ. ಘನನೀಲ ಆಕಾಶದಲ್ಲಿ ಬೆಳ್ಳಿಯ ಚಿಕ್ಕೆ ಮೂಡಿದರೆ ಅದು ತನ್ನ ಇನಿಯಳ ನೀಲಸೀರೆಯ ಮೇಲಣ ನಕಾಸೆಯೆಂದು ತಿಳಿಯುತ್ತಿದ್ದ. ಅವನ ದೇಹವನ್ನೆಲ್ಲಿ ಇರಿದು ನೋಡಿದರೂ ನೀಲ ರಾರಾಜಿಸುತ್ತಿದ್ದಳು. ತನ್ನ ಬಾಳು ತುಂಬಿತು, ಜೀವನದಲ್ಲಿ ಮನುಷ್ಯ ಏನು ಬಯಸುತ್ತಾನೆಯೋ ಅದೆಲ್ಲಾ ತನ್ನ ಕೈಸೇರಿತು ಎಂಬ ವಿಸ್ಮೃತಿ ರಾಜನನ್ನು ಬಲವಾಗಿ ಬಿಗಿದಪ್ಪಿತ್ತು. ಇದು ತಮ್ಮ

ಪ್ರಣಯದಾಟವೋ ವಿಧಿಯ ಕ್ರೂರ ಕೇಳಿಯೋ ಎಂದು ಯೋಚಿಸುವಷ್ಟು ಅವರಿಗೆ ವ್ಯವಧಾನವಿಲ್ಲ, ಶಾಂತಿಯಿಲ್ಲ, ಇಚ್ಛೆಯಿಲ್ಲ.

ಎರಡು ದಿನ ಎರಡು ಕ್ಷಣದಂತೆ ಕಳೆಯಿತು. ನೀಲಾ ಪಾಠಕ್ಕೆ ಕೂಡ ಹೋಗಲಿಲ್ಲ. ತಮ್ಮನ ಕೈಯಲ್ಲಿ ತನಗೆ ಮೈಯಲ್ಲಿ ಸರಿಯಿಲ್ಲವೆಂದು ಹೇಳಿ ಕಳುಹಿಸಿದಳು. ರಾಜ ಮನೆಗೆ ಹೋಗಬೇಕೆಂದು ಆಗಾಗ್ಗೆ ಯೋಚಿಸುತ್ತಿದ್ದ. ನೀಲಾ ಯಾವದಾದರೂ ಮಾತು ತೆಗೆದು ಅದನ್ನು ಮರೆಸಿಬಿಡುತ್ತಿದ್ದಳು.

ಒಂದು ರಾತ್ರಿ ಬಿಸಿಲುಮುಚ್ಚಿನ ಮೇಲೆ ರಾಜ, ನೀಲಾ ಕುಳಿತಿದ್ದರು. ನೀಲಾ ರಾಜನ ಬುಜದ ಮೇಲೊರಗಿ 'ಕಾನಡಾ' ರಾಗವನ್ನು ಗುಂಯ್‌ಗುಟ್ಟುತ್ತಿದ್ದಳು. ರಾಜ ಕೇಳಿದ:

"ಏಕೆ ನೀಲಾ, ಕಾನಡಾ ಗುಂಯ್‌ಗುಟ್ಟುತ್ತಿರುವೆ."

"ವಿರಹಿಣಿಗೆ ಗೊತ್ತಾದ ರಾಗವಲ್ಲವೇ ಅದು."

"ನೀನೀಗ ವಿರಹಿಣಿಯಲ್ಲವಲ್ಲಾ!"

"ವಿರಹದ ದೆಸೆಯಲ್ಲಿರುವುದಕ್ಕಿಂದ ವಿರಹದ ಬರುವಿನ ನೆನೆಪು ಹೆಚ್ಚು ದುಃಖಕರ."

"ನಿಜ. ನಾನು ನಾಳೆ ಹೋಗಬೇಕು. ಆದರೇನು?"

"ಏನು ಆದರೆ?"

"ಮತ್ತೇ ಬಂದೇ ಬರುವೆನಲ್ಲಾ!"

"ಯಾವಾಗಲೋ. ಮುಂದಿನ ಮಾನವಮಿಗೇನೋ!"

"ಅಷ್ಟು ದೂರ ತಡೆಯಲು ನನ್ನ ಮನಸ್ಸು ಸಮ್ಮತಿಸುವುದೇ?"

"ನಿಮಗೇನು ಗಂಡಸರು. ಹೇಗಾದರೂ ಸರಿ ಹೋಗಿಸಿಕೊಳ್ಳುತ್ತೀರಿ."

"ಇಲ್ಲ ಬೇಗ ಬರುತ್ತೇನೆ."

"ನಾನೇ ಮತ್ತೆ ಹೇಳಿಕಳಿಸಬೇಕೋ?"

"ಬೇಡ. ಅದು ಸರಿ, ನಿಂಗನನ್ನು ಎಲ್ಲಿ ಹಿಡಿದೆ."

"ಗಂಗಾಧರನನ್ನು ಗುರುಗಳ ಮನೆಗೆ ಕಳಿಸಿ ನಿಂಗನನ್ನು ಕರೆಸಿಕೊಂಡು ಅವನಿಗೆ ಒಳ್ಳೆಯ ಮಾತನಾಡಿ ಕೈಗೆ ಒಂದು ರೂಪಾಯಿ ಕೊಟ್ಟು ಕಳಿಸಬೇಕಾಯಿತು. ಗಂಗಾಧರನಿಗೆ ನಿಮ್ಮ ಮನೆ ಗೊತ್ತಿಲ್ಲ."

" ಹಾಗಾದರೆ ನಿನಗೆ ಒಂದು ರೂಪಾಯಿ ಸಾಲ ತೀರಿಸಬೇಕಾಯಿತು. "

ಅವಳೂ ನಕ್ಕಳು. ಅವನೂ ನಕ್ಕ. ಮರುಕ್ಷಣವೇ ತನ್ನೆಲ್ಲಾ ಭೋಗ ವಿಲಾಸಗಳೂ ನೀಲನ ಖರ್ಚಿನಲ್ಲಿಯೇ ಕಳೆಯುತ್ತಿರುವುದು ಜ್ಞಾಪಕಕ್ಕೆ ಬಂದು ಒಂದು ರೂಪಾಯಿನ ಪ್ರಸ್ತಾಪ ಮಾಡಿದುದಕ್ಕೆ ನಾಚಿದ.

" ಹೀಗೆ ನಾನು ಬಂದು, ಹಗಲೂ ರಾತ್ರಿ ಇಲ್ಲಿ ಕಳೆಯುವುದು ನ್ಯಾಯವೇ ನೀಲಾ ? "

" ಇದೇನು ಹೀಗೆ ಕೇಳುತ್ತೀರಿ. ನನ್ನ ಮನೆಯಲ್ಲಿ ನಾನು ಸ್ವತಂತ್ರಳು. "

" ನಿನ್ನ ತಾಯಿ ಏನಂದುಕೊಂಡಾಳು................ನಿನ್ನ ಯಜಮಾನ ................"

" ಆ ಚಿಂತೆ ಈಗೇಕೆ. ನನ್ನ ಬಾಳು ಸಾಕಷ್ಟು ಕಷ್ಟದಲ್ಲಿ ಬೆಳೆದಿದೆ. ಈಗ ಸುಖದ ಕನಸು ಕಾಣುತ್ತಿರುವಾಗ ಕಹಿ ನೆನಪುಗಳೇಕೆ ? "

" ಸುಖ ಕನಸು ನೀಲಾ. ಇಂದಿನ ಸುಖ ನಾಳೆ ಯಾವ ಪ್ರತಿಕ್ರಿಯೆಯನ್ನು ತಂದೊಡ್ಡುವುದೋ ? "

" ಹಾಗೆಂದು ಜೀವಮಾನವನ್ನೆಲ್ಲಾ ಗೋಳಿನಲ್ಲೇ ಕಳೆಯೋಣವೇ ? "

" ಇಲ್ಲ...............ಆದರೆ..............."

" ಆ ಮಾತು ಸಾಕು ದೊರೆ. " ಎಂದು ನುಲಿಯುತ್ತಾ ರಾಜನ ತೊಡೆಯ ಮೇಲೆ ಮಲಗಿದಳು. ಒಂದು ಕೈಯಿಂದ ರಾಜನ ಮುಂಗುರುಳು, ಮುಖವನ್ನು ನೇವರಿಸುತ್ತಾ " ನನ್ನ ಕೈ ಬಿಡಬೇಡಿ ದೊರೆ. " ಎಂದಳು.

" ನನ್ನ ಕೈ ಹಿಡಿದಿರುವವಳು ನೀನು. ಆ ಮಾತು ನಾನು ಹೇಳಬೇಕಾಗಿದೆ. "

" ಇನ್ನೂ ನೀವು ನನ್ನದು ನಿಮ್ಮದು ಎಂದು ಭೇದವೆಣಿಸುತ್ತೀರಲ್ಲಾ. "

" ಗಂಡಸಿನ ಮನಸ್ಸಿನಿಂದ ಆ ಭೇದ ದೂರವಾಗುವುದಿಲ್ಲ ನೀಲಾ. "

" ನಾನೇನು ನಿಮಗೆ ಕಿರೀಟ ಹೊರೆಸಿರುವುದು. ಇವತ್ತಲ್ಲ ನಾಳೆ ನೀವು ಇದಕ್ಕೆ ನೂರರಷ್ಟು 'ಮಾಡೇ ಮಾಡುತ್ತೀರಿ. ಆದರೆ ನಾನು ಏನೂ ಬಯಸುವುದಿಲ್ಲ. "

"ನಾನು ದರಿದ್ರ. ನೀನು ನನ್ನಿಂದ ಬಯಸುವುದಾದರೆ ನನ್ನ ದಾರಿದ್ರ್ಯದ ಭಾಗ ಬಯಸಬೇಕು."

"ಆಗಲಿ. ಅದಕ್ಕೂ ನಾನು ಸಿದ್ಧ."

"ನಿನಗೆ ಮರುಳು ಹಿಡಿದಿದೆ."

"ಹೋಗಲಿ. ಮುಂದೆ ಏನು ಮಾಡಬೇಕೆಂದಿರುವಿರಿ?"

"ಹೇಳಿದರೆ ನೀನು ನಗಬಹುದು."

"ಇಲ್ಲ ಹೇಳಿ."

"ನಾಟಕಕ್ಕೆ ನನ್ನ ಜನ್ಮ ನಿವೇದನ ಮಾಡಬೇಕೆಂದಿದ್ದೇನೆ."

"ನಿಮ್ಮಂತಹವರು ನಾಟಕಕ್ಕೆ ಸೇರುವುದೇ?"

"ನಮ್ಮಂತಹವರು ಅಲ್ಲಿ ಇಲ್ಲವೆಂದೇ ಅದರ ಸ್ಥಿತಿ ಇಷ್ಟು ಹಾಳಾಗಿರುವುದು."

"ಲೋಕ ಏನನ್ನುತ್ತದೆ?"

"ಕುಲಗೆಟ್ಟು ಪೋಲಿಯಾದ ಅನ್ನುತ್ತದೆ. ಅನ್ನುವವರು ಮಾತು ಕಟ್ಟಿಕೊಂಡು ಹೋದರೆ ಎಲ್ಲಿಗೆ ಪೂರೈಸುವುದು. ಲೋಕದ ಮಾತೇ ನಡೆದಿದ್ದರೆ ಇವತ್ತು ಜಗತ್ತಿನಲ್ಲಿ ಸಂಗೀತ, ಸಾಹಿತ್ಯ ಯಾವದೂ ಇರುತ್ತಿರಲಿಲ್ಲ."

"ನಿಮಗೆ ನೀತಿ ಹೇಳುವಷ್ಟು ಯೋಗ್ಯತೆ ನನ್ನಲ್ಲಿಲ್ಲ. ಆದರೆ ನನ್ನನ್ನೇನು ಮಾಡುವಿರಿ?"

"ಹಾಗಂದರೆ............?"

"ಕಂಪೆನಿ ಮುಂಡಿಕೊಂಡು ನೀವು ಊರೂರಿಗೆ ಹೋದರೆ ನನ್ನ ಗತಿ?"

"ನೋಡೋಣ, ಎಲ್ಲಾ ನನ್ನ ಇಚ್ಛೆಯಂತೆಯಾದರೆ ನಿನ್ನ ಬಿಟ್ಟು ಹೋಗುತ್ತೇನೆಯೇ? ನಿನಗಿಂತಲೂ ಚೆನ್ನಾಗಿರುವವರು ರಾಣೀ ಪಾರ್ಟಿಗೆ ಯಾರು ಸಿಕ್ಕಬೇಕು."

"ರಾ........ಜಾ........" ಎಂದು ಉದ್ವೇಗದಿಂದ ಎದ್ದು ಕುಳಿತಳು.

"ನಿಜವೇ ರಾಜಾ, ನನ್ನ ಕೈಯಲ್ಲಿ ಪಾರ್ಟು ಮಾಡಿಸುತ್ತೀರಾ?"

"ಯಾಕಾಗಬಾರದು."

ನೀಲನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

ರಾಜ ಪಾತ್ರದ ದೃಷ್ಟಿಯಿಂದ ಒಮ್ಮೆ ನೀಲನನ್ನು ನೋಡಿದ. "ಏಕಾಗಬಾರದು. ರೂಪ, ಯೌವನ, ಸಂಗೀತ ಎಲ್ಲಾ ಇದೆ. ಬಾಯಲ್ಲಿ ಮಾತುಗಳು ಸ್ಪಷ್ಟವಾಗಿ ಹೊರಡುತ್ತವೆ. ನಾನು ನಾಯಕ, ನೀಲಾ ನಾಯಕಿ ಮಾಡಿದರೆ ನಾಟಕ ನಿಜವಾಗಿಯೂ ಚೆನ್ನಾಗಬಹುದು." ಎಂದು ಭಾವಿಸಿದ.

ಮಾರನೆಯ ಬೆಳಿಗ್ಗೆ ರಾಜನನ್ನು ಕಳುಹಿಸಿಕೊಡುವಾಗ ನೀಲಾ ಅರೆಜೀವವಾಗಿ ಬಿಟ್ಟಿದ್ದಳು. ಅವಳ ಕಣ್ಣಲ್ಲಿ ಚಿಲುಮೆ ಚಿಮ್ಮುತ್ತಿತ್ತು. ರಾಜ ಎಷ್ಟು ಸಮಾಧಾನ ಹೇಳಿದರೂ ಅವಳಿಗೆ ಸಮಾಧಾನವಾಗದು. ಬೇಗ ಬರುತ್ತೇನೆಂದು ಮತ್ತೆ ಮತ್ತೆ ಅವಳ ಮನಸ್ಸಿಗೆ ಧೈರ್ಯ ತರ ಬೇಕಾಯಿತು. ಬೆಳಿಗ್ಗೆ ಆರಂಭವಾದ ಸಮಾಧಾನ ಪ್ರಕರಣ ಮುಗಿಯುವ ಹೊತ್ತಿಗೆ ಸೂರ್ಯ ನೆತ್ತಿಯ ಮೇಲೆ ಬಂದಿದ್ದ. ರಾಜನ ಮನಸ್ಸೂ ಭಾರವಾಗಿತ್ತು. ವಿಯೋಗ ಅವನಿಗೂ ಪ್ರಿಯವಾಗಿರಲಿಲ್ಲ. ವಿಧಿಯಿಲ್ಲದೆ ಅವಳನ್ನು ಬಿಟ್ಟು ಮನೆಯ ಕಡೆ ನಡೆದ.

ರಾಜನಿಗೆ ದೊಡ್ಡ ಚಿಂತೆ ಅದರ ಜತೆ ಭಯ ಹುಟ್ಟಿತ್ತು. "ತಂದೆ ಊರಿಗೆ ಬಂದು ಬಿಟ್ಟಿದ್ದರೆ ಏನು ಗತಿ" ಮನೆ ತಲುಪಿದವನೇ ಮೊದಲು ಜೀವಕ್ಕನನ್ನು ಕೇಳಿ, ತಂದೆ ಇನ್ನೂ ಬಂದಿಲ್ಲವೆಂಬುದನ್ನು ದೃಢಮಾಡಿಕೊಂಡ ಮೇಲೆ ಹಾಯಾಗಿ ಉಸಿರಾಡುವಂತಾಯಿತು. ಸೀತಮ್ಮ ಎದ್ದು ಓಡಿ ಯಾಡುತ್ತಿದ್ದಳು. ಅವಳ ಮುಖಭಾವ ಗಂಭೀರವಾಗಿಬಿಟ್ಟಿತ್ತು. ಎಂದಿನಂತೆ ಮಾತನಾಡಿಸಲಿಲ್ಲ. ಕೂಡಲೆ ಕಾಫಿ ಮಾಡಿ ತಂದು ಕೈಗೆ ಕೊಡಲಿಲ್ಲ. ಇನ್ನು ತಾನೂ ಬಿಂಕಮಾಡಕೂಡದೆಂದು ರಾಜನೇ ಮಾತು ತೆಗೆದ;

"ಕೋಪವೇ ಸೀತಾ ?"

"ಕೋಪ ಏಕೆ ?"

"ನಾನು ಮನೆಗೆ ಬರಲಿಲ್ಲಾಂತ."

"ಹೂಂ, ಏಕೆ ಬರಲಿಲ್ಲ ?"

"ಅಚ್ಯುತನ ಭಾವನಿಗೆ ಸಖತ್‌ಕಾಹಿಲೆಯಂತ ತಂತೀ ಬಂದಿತ್ತು. ಅವನೂ ಹೊರಟು ನಿಂತಿದ್ದ. ಬಲವಂತ ಮಾಡಿ, ನನ್ನನ್ನು ಎಳೆದುಕೊಂಡು ಹೋದ."

"ಹೀಗೆ ಹೋಗಬೇಕಾಗಿದೆಯಂತ ಹೇಳಿ ಕಳಿಸೋದಕ್ಕೂ ಆಗಲಿಲ್ವೇನು."

"ಅಲ್ಲಿ ಗೋಳು, ಗಡಿಬಿಡಿಯಲ್ಲಿ ಯಾರನ್ನ ತರಲಿ, ಯಾರ ಕೈಯಲ್ಲಿ ಹೇಳಿಕಳಿಸಲಿ."

"ಕಾಹಿಲೆಯವರಿಗೆ ಹೇಗಿದೆ?"

"ಸಣ್ಣಗೆ ಲಕ್ವ ಹೊಡೆದಿದೆ. ಗುಣವಾಗತ್ತೇಂತ ಡಾಕ್ಟರು ಹೇಳಿದರು."

"ಏಳಿ, ಹೊತ್ತಾಯ್ತು, ಸ್ನಾನವಾಡಿ ಅಡಿಗೆಯಾಗಿದೆ."

"ಕೋಪ ಬಿಟ್ಟೆಯಷ್ಟೆ."

"ನಿಮ್ಮ ಮುಖ ನೋಡಿದಾಗಲೇ ಕೋಪ ಹೋಗಿತ್ತು."

"ಹಾಗಾದರೆ ಸುಳ್ಳುಸುಳ್ಳು ನಟಿಸಿದೇ ಅನ್ನು."

"ಆ ನಾಟಕ—ನಟನೆ ಎಲ್ಲಾ ನಿಮ್ಮ ಪಾಲಿಗೇ ಬಿಟ್ಟದ್ದೇನೆ. ಕಾಫಿ ಬೇಕಾಗಿತ್ತೇನೋ?"

"ಕೊಟ್ಟರೆ ಕುಡಿದು ಸ್ನಾನ ಮಾಡುತ್ತೇನೆ."

"ಊಟಕ್ಕೆ ಮುಂಚೆ ಕಾಫಿ ಕುಡಿದರೆ ಇನ್ನು ಅನ್ನ ಏನು ಸೇರುತ್ತೆ."

"ಸೇರದಿದ್ದರೆ ನೀನು ಬಿಡುತ್ತೀಯಾ. ಗಂಟಲು ಬಿಡಿಸಿ ಗಿಡಿದು ತುಂಬುತ್ತೀ."

ಸೀತಮ್ಮ ನಗುತ್ತಾ ಕಾಫಿ ತರುವುದಕ್ಕೆ ಹೋದಳು.

೮

ಪರೀಕ್ಷೆ ಹತ್ತಿರವಾಗುತ್ತ ಬಂತು. ಗೆಳೆಯರು ಸಿಕ್ಕುವುದೇ ದುರ್ಲಭವಾಗುತ್ತ ಬಂತು. ದೇವದಾಸ ಡಿಗ್ರಿಯಾದ ಕೂಡಲೆ ರೆವಿನ್ಯೂ ಪ್ರೊಬೆಷನರಿ ನಾಮಿನೇಷನ್ ಹೊಡೆಯಬೇಕೆಂದು ಲೆಕ್ಕಹಾಕಿಕೊಂಡು ಪುಸ್ತಕಗಳಿಗೆ ಬಲವಾಗಿ ಗಂಟುಬಿದ್ದಿದ್ದ. ನಾಪಾಸಾಗಿ ಬಿಟ್ಟರೆ ಮನೆಯಲ್ಲಿ ಶಾಲೆಯನ್ನೆಲ್ಲಿ ಬಿಡಿಸಿಬಿಡುವರೋ ಎಂಬ ಭಯ ಸೀತಾರಾಮೂಗೆ. ತಿರುಮಲ, ಅಚ್ಯುತ ಕೂಡಿ ಅಭ್ಯಾಸ ನಡೆಸಿದ್ದರು. ಅಮಾವಾಸ್ಯೆಗೊಮ್ಮೆ ಪೌರ್ಣಮಿಗೊಮ್ಮೆ ಗೆಳೆಯರು ಯೂನಿಯನ್ನಿನಲ್ಲಿ ಸೇರುತ್ತಿದ್ದರು. ಆಗಲೂ ಪರೀಕ್ಷೆ, ಪಠ್ಯ ಪುಸ್ತಕಗಳ ಮಾತೇ ಸಾಗುತ್ತಿತ್ತು. ಯೂನಿಯನ್, ನಾಟಕ ಕೆಲವು ಕಾಲ ವಿಶ್ರಾಂತಿಪಡೆಯಬೇಕಾಗಿತ್ತು.

ರಾಜನಿಗೆ ಪರೀಕ್ಷೆಯ ಚಿಂತೆಯಿರಲಿಲ್ಲ. ಚೆನ್ನಾಗಿ ಓದಿ ಮುಂದೆ ಡಿಗ್ರಿ ತೆಗೆದುಕೊಳ್ಳಬೇಕೆಂಬ ಆಸೆ ಅವನಿಗೆ ಎಳ್ಳಷ್ಟೂ ಇರಲಿಲ್ಲ. ಶಾಲೆಯ ಪುಸ್ತಕಗಳೆಂದರೆ ತಲೆಬೇಸರ ಬಂದು ಬಿಡುತ್ತಿತ್ತು. ಈ ವರ್ಷ ಪರೀಕ್ಷೆಗೆ ಕುಳಿತ ಶಾಸ್ತ್ರಮಾಡಿ ಮುಂದೆ ಕಾಲೇಜಿಗೆ ಶರಣು ಹೊಡೆದುಬಿಡುವುದೆಂದು ಅವನು ನಿಶ್ಚಯಿಸಿಕೊಂಡಿದ್ದನು.

ಸಂಗೀತ ಶಿಕ್ಷಣದ ಜತೆಗೆ ಹ್ಯಾಂಲೆಟ್ ನಾಟಕದ ಭಾಷಾಂತರ ಕೆಲಸ ಹುರುಪಿನಿಂದ ಸಾಗಿತು. ಸಂಗೀತದಲ್ಲಿಯೂ ಗುರುಗಳು ಬೆರಗಾಗುವಷ್ಟು ಮುಂದೆ ಹೋಗಿದ್ದ. ಸ್ವಬುದ್ಧಿಯಿಂದ ರಾಗವನ್ನು ಬೆಳಸಿ ಮೂರುಕಾಲಗಳಲ್ಲಿ ಹಾಡುತ್ತಿದ್ದ. ಪರಂಪರೆಯನ್ನು ಬಿಡದೆ ತನ್ನ ವೈಯಕ್ತಿಕ ದಾರಿಯೊಂದನ್ನು ಅವನು ನಿರ್ದೇಶಿಸಿಕೊಳ್ಳುತ್ತಿದ್ದ. ಊರಿನಲ್ಲಿ ಎಲ್ಲಿ ಯಾರ ಸಂಗೀತ ಕಛೇರಿ ಯಾದರೆ ರಾಜ ತಪ್ಪದೆ ಹೋಗುತ್ತಿದ್ದ. ಅವರಲ್ಲಿ ಸಂಗ್ರಹಿಸಲು ಯೋಗ್ಯವಾದ ವಿಷಯಗಳು ಸಿಕ್ಕಿದರೆ, ಮನೆಗೆ ಬಂದು ಅವುಗಳನ್ನು ಕೂಡಲೆ ಪಾಠ ಮಾಡಿಕೊಳ್ಳುತ್ತಿದ್ದ.

ರಾಜನ ಸಂಗೀತ ಪ್ರತಿಭೆಯಲ್ಲಿ ಪೂರ್ಣ ನಂಬಿಕೆಯಿಟ್ಟಿದ್ದವಳೆಂದರೆ ನೀಲಾ. ಅವಳ ಕಣ್ಣಿಗೆ ಅವನು ಪ್ರತ್ಯಕ್ಷ ತ್ಯಾಗರಾಜ ಸ್ವರೂಪ. ಅವನು ಬಂದಾಗ ತಾನೇ ತಂಬೂರಿ ಶೃತಿಮಾಡಿ ಅವನನ್ನು ಹಾಡಲಿಕ್ಕೆ ಹಚ್ಚುತ್ತಿದ್ದಳು. ತಂಬೂರಿಯ ಝೇಂಕಾರ ಕಿವಿಗೆ ಬಿದ್ದರೆ ಸಾಕು, ರಾಜ ತಲ್ಲೀನನಾಗಿ ಬಿಡುತ್ತಿದ್ದ.

ಪರೀಕ್ಷೆ ತೀರ ಸಮೀಪಕ್ಕೆ ಬಂತು. ಊರಿನ ಸಂಗೀತಾಭಿಮಾನಿಗಳು ಪ್ರಸಿದ್ಧ ವಿದುಷಿ ಕೊಯಮುತ್ತೂರು ತಾಯಮ್ಮನ ಕಛೇರಿಯನ್ನು ಏರ್ಪಡಿಸಿದ್ದರು. ರಾಜಾ, ನೀಲಾ ಅದಕ್ಕೆ ಹೋಗುವುದೆಂದು ನಿಶ್ಚಯಿಸಿದರು. ಆದರೆ ಬೇರೆ ಬೇರೆ ಹೋಗುವುದು, ಬೇರೆ ಬೇರೆಯಾಗಿ ಮನೆಗೆ ಹಿಂದಿರುಗುವುದೆಂದು ಗೊತ್ತಾಯಿತು.

ತಾಯಿ ಪಂಡಿತ ಪಾಮರರಿಬ್ಬರೂ ರಂಜನೆಯಾಗುವಂತೆ ಹಾಡಬಲ್ಲ ಕಲಾವಿದೆಯಾಗಿದ್ದಳು. ಶಾಸ್ತ್ರಜ್ಞಾನ, ಕಲಾಮಾಧುರ್ಯಗಳೆರಡೂ ಅವಳ ಹಾಡಿಕೆಯಲ್ಲಿ ಸಮಸಮವಾಗಿ ಕೂಡಿದ್ದವು. ಮತ್ತೆ ಲಯವಿನ್ಯಾಸಕ್ಕೆ ಆಕೆಯ ಸಂಗೀತ ಸುಪ್ರಸಿದ್ಧವಾಗಿತ್ತು.

ತಾಯಮ್ಮ ಕೆಲವು ಕೀರ್ತನೆಗಳನ್ನು ಮುಗಿಸಿ ಅಷ್ಟಪದಿ, ಜಾವಡಿಗಳನ್ನು ತೆಗೆದುಕೊಂಡಳು. ಜಾವಡಿಗಳನ್ನು ಅಷ್ಟು ರಸವತ್ತಾಗಿ ರಾಜ ಯಾರ ಬಾಯಲ್ಲಿಯೂ ಕೇಳಿರಲಿಲ್ಲ. ಭಕ್ತಿ, ಶೃಂಗಾರ ತುಂಬಿ ಅವಳು ಹಾಡುತ್ತಿದ್ದ ಜಾವಡಿಗಳನ್ನು ಕೇಳಿ ಶ್ರಾವಕರು ಮುಗ್ಧರಾದರು. ರಾಜನಿಗಂತೂ ಹೊಸ ಲೋಕ ಒಂದನ್ನು ಕಂಡಂತಾಯಿತು.

ಕಛೇರಿ ಮುಗಿಯುತ್ತಲು ರಾಜ ಒಂದು ನಿರ್ಜನ ತಾಣದಲ್ಲಿ ಹೋಗಿ ಕುಳಿತು ವಿದುಷಿ ಹಾಡಿದ ಜಾವಡಿಗಳನ್ನು ಪಾಠಮಾಡಿಕೊಳ್ಳಲೆತ್ನಿಸಿದ. ಅವಳ ಮಾರ್ಗವನ್ನು ಅನುಕರಿಸುತ್ತಾ ಆವನಿಗೆ ಬೆಳಕು ಹರಿದಂತಾಯಿತು. ಶಾಕುಂತಲ ನಾಟಕದ ಒಂದು ಹಾಡನ್ನು ತೆಗೆದುಕೊಂಡು ಜಾವಡಿಯ ಮಟ್ಟಿನಲ್ಲಿ ಹಾಡಿದ. ಒಂದಕ್ಕೊಂದು ಹಾಲು–ಜೇನಿನಂತೆ ಕೂಡಿದುದನ್ನು ಕಂಡು ಅವನ ಮನಸ್ಸು ಪರಮಾನಂದ ಪಡೆಯಿತು.

ಮಾರನೆಯ ದಿವಸ ತನ್ನ ಬೋಧವನ್ನು ನೀಲನಿಗೆ ವರ್ಣಿಸಿ ಜಾವಡಿ ಮಟ್ಟಿನಲ್ಲಿ ತಾನು ಕೂಡಿಸಿದ ಶಾಕುಂತಲ ನಾಟಕದ ಹಾಡನ್ನು ಹೇಳಿದ. ನೀಲನಿಗೆ ಪರಮಾಶ್ಚರ್ಯವಾಯಿತು. ತಾನು ರಾಜನ ಸಂಗೀತ ಪ್ರತಿಭೆಯ ಬಗ್ಗೆ ಭಾವಿಸಿದುದು ತಪ್ಪಲ್ಲವೆಂದು ಅವಳಿಗೆ ಭಾಸವಾಯಿತು.

"ಹೇಗೆ ಕೂಡತ್ತೆ ನೀಲಾ?"

"ನೊಗಸಾಗಿ ಕೂಡತ್ತೆ. ಈ ಹುಡಿಕೆ ಜನಗಳ ಮನಸ್ಸನ್ನು ಸೂರೆಗೊಳ್ಳುತ್ತದೆ."

"ಕೀರ್ತನೆಯ ಧಾಟಿಯಲ್ಲಿ ನಾಟಕದ ಮಟ್ಟುಗಳನ್ನು ಹಾಡುವುದು ಏಕೋ ನನಗೆ ಅಷ್ಟು ಹಿತವಾಗಿ ಕಾಣುತ್ತಿರಲಿಲ್ಲ. ಅದಕ್ಕೆ ಬೇರೆ ಮಾರ್ಗವನ್ನು ಹುಡುಕುತ್ತಿದ್ದೆ. ಅನಾಯಾಸವಾಗಿ ತಾಯಮ್ಮ ನನಗೆ ಬೆಳಕು ಕಾಣಿಸಿದಳು."

"ಆಕೆ ಅದನ್ನು ಅನೇಕ ವರ್ಷಗಳಿಂದ ಹಾಡುತ್ತಲೇ ಇದ್ದಾರೆ. ಆದರೆ ಬೆಳಕನ್ನು ಕಂಡದ್ದು ನಿಮ್ಮ ಪ್ರತಿಭೆಯ ಪ್ರಭಾವ."

"ಛೆ! ಛೆ!! ಹಾಗುಂಟೇ. ಆಕೆ ಸಾಕ್ಷಾತ್ ಸರಸ್ವತಿ. ನನಗೂ ಅಷ್ಟು ಭಿಕ್ಷೆ ನೀಡಿದ್ದಾಳೆ."

"ನಿಮ್ಮ ವಿನಯ ಯಾರನ್ನಾದರೂ ಮೂಕರನ್ನಾಗಿಸುತ್ತದೆ."

"ವಿದ್ಯೆಯಿಲ್ಲ ಬುದ್ಧಿಯಿಲ್ಲ, ಸ್ವಲ್ಪ ವಿನಯವೂ ಬೇಡವೇ ?"

"ನಮ್ಮ ಸಂಗೀತಗಾರರನ್ನು ಕಾಣಿರಿ."

"ಏಕೆ ?"

"ನಾಲ್ಕು ಕೀರ್ತನೆ ಹಾಡುವುದಕ್ಕೆ ಬರುವುದಕ್ಕಿಲ್ಲ ಅವರು ಎಲ್ಲಾ ವಿದ್ವಾಂಸರ ಗುಣದೋಷಗಳನ್ನು ಅಳೆದು ಸುರಿಯಲು ಮೊದಲುಮಾಡುತ್ತಾರೆ."

"ಅದರಿಂದ ಅವರಿಗೇ ಹಾನಿ. ಅವರ ವಿದ್ಯೆ ಅರ್ಧದಲ್ಲಿಯೇ ನಿಂತು ಹೋಗುತ್ತೆ."

"ಸತ್ಯವಾದ ಮಾತು."

"ಸಂಗೀತ ವಿದ್ಯೆ ಆಕಾಶದಷ್ಟು ವಿಸ್ತಾರವಾಗಿದೆ, ಸಮುದ್ರದಷ್ಟು ಆಳವಾಗಿದೆ. ಎಷ್ಟು ಕಲಿತರೂ ಕಲಿತೆವೆನಿಸುವುದಿಲ್ಲ. ಕಲಿಯುತ್ತ ಕಲಿಯುತ್ತ ನನಗೆ ಗೊತ್ತಿರುವುದು ಎಷ್ಟು ಸ್ವಲ್ಪ ಎಂಬ ಜ್ಞಾನವುಂಟಾಗುತ್ತದೆ. ಸಾಗರದ ಮೇಲೆ ಮೇಲೆ ಹುಡುಕಿದರೆ ಜೊಂಡು, ಕಸರೆ ಸಿಕ್ಕುತ್ತದೆ. ಪ್ರಾಣವನ್ನು ನಿರ್ಲಕ್ಷಿಸಿ ಆಳವಾಗಿ ಮುಣುಗಿದರೆ ಅಪರೂಪವಾದ ರತ್ನ ಮುತ್ತುಗಳು ದೊರೆಯುತ್ತದೆ."

"ಆದರೆ ಜನಕ್ಕೆ ಬೇಕಾಗಿರುವುದು ಮುತ್ತು ರತ್ನವಲ್ಲ, ಜೊಂಡು ಕಸರೆ."

"ತಪ್ಪು ತಿಳುವಳಿಕೆ. ನಿಜವಾದ ವಿದ್ಯಾರ್ಥಿ ಜನಗಳನ್ನು ಪರಿಗಣನೆಗೇ ತೆಗೆದುಕೊಳ್ಳುವುದಿಲ್ಲ. ಅವರಿಗೆ ಬೇಕಾಗಲಿ ಬೇಡವಾಗಲಿ ತನ್ನ ಮುತ್ತುರತ್ನಗಳನ್ನೇ ನೀಡುತ್ತಾನೆ."

"ಜನಕ್ಕೆ ಬೇಡದಿದ್ದರೆ ಅವನು ನೀಡಿ ಏನು ಸಾರ್ಥಕ."

"ಅದರಿಂದ ಅವರಿಗೇ ನಷ್ಟ, ಅವನಿಗೇನೂ ಇಲ್ಲ. ಜನ ಬೇಡವೆಂದರೆಂದು ಮುತ್ತುರತ್ನಗಳು ಕಂದುವುದಿಲ್ಲ, ಕುಂದುವುದಿಲ್ಲ—ಅವುಗಳ ಬೆಲೆ ತಗ್ಗುವುದಿಲ್ಲ."

"ಈ ತತ್ತ್ವ ಸಾಮಾನ್ಯರಿಗೆ ಅರ್ಥವಾಗುವುದಿಲ್ಲ ದೊರೆ."

"ನಾನು ಅರ್ಥ ಮಾಡಿಸುತ್ತೇನೆ ನೀಲಾ. ತಾಯಮ್ಮನ ಕೃಪೆಯಿಂದ ಇಂದು ನಾನು ಸಂಪಾದಿಸಿಕೊಂಡಿರುವ ಜ್ಞಾನವನ್ನು ನಮ್ಮ ಜನಗಳ

ಮುಂದಿಡುತ್ತೇನೆ. ನಾಟಕದ ಸಂಗೀತವೆಂದರೆ 'ರಂಗೀತ'ವೆಂಬ ಭಾವನೆಯನ್ನು ಹೋಗಲಾಡಿಸಿ ಹೊಸ ಭಾವನೆಯನ್ನು ಬಿತ್ತುತ್ತೇನೆ."

"ದೇವರು ಒಳ್ಳೆಯದನ್ನು ಮಾಡಲಿ" ಎಂದು ನೀಲಾ ಮನಸಾರೆ ಹಾರೈಸಿದಳು.

ರಾಜನ ತಂದೆಗೆ ಅವನ ಪಾಠಪ್ರವಚನ ಸ್ವಲ್ಪವೂ ತೃಪ್ತಿಕರವಾಗಿರಲಿಲ್ಲ. ಪರೀಕ್ಷೆ ಹತ್ತಿರ ಬಂದರೂ ರಾಜ ಪಠ್ಯಪುಸ್ತಕಗಳನ್ನು ಗಮನಿಸದಿರುವುದನ್ನು ಕಂಡು ಸ್ವಲ್ಪ ಕಿಟಿಕಿಟಿಯಾದರು. ಒಂದು ದಿನ ಮಗನನ್ನು ಕರೆದು "ನಿನ್ನ ಪರೀಕ್ಷೆ ಯಾವಾಗಪ್ಪಾ ರಾಜಣ್ಣ?" ಎಂದರು.

"ಮುಂದಿನ ತಿಂಗಳು"

"ಪಾಠಗಳೆಲ್ಲಾ ನೋಡಿಕೊಂಡಿದ್ದೀಯಾ!"

"ನೋಡಿಕೊಂಡಿದ್ದೇನಪ್ಪಾ, ಕ್ಲಾಸು ಪರೀಕ್ಷೆ. ಅಷ್ಟೇನೂ ಹಿಂಸೆಯಿಲ್ಲ."

"ನೀನು ಪುಸ್ತಕ ಹಿಡಿದದ್ದೇ ನಾನು ನೋಡಲಿಲ್ಲ."

"ಪಾರ್ಕಿನಲ್ಲಿ ಕುಳಿತು ನಾನೂ ಅಚ್ಯುತ ಓದುತ್ತೇವಪ್ಪಾ."

"ಚೆನ್ನಾಗಿ ಓದಪ್ಪಾ. ನಾನಂತೂ ಒಂದು ಬಿ. ಎ. ಪಾಸುಮಾಡಲಿಲ್ಲ. ನೀನಾದರೂ ಓದಿ ಮುಂದಕ್ಕೆ ಬಂದರೆ ವಂಶಕ್ಕೂ ಕೀರ್ತಿ, ನನಗೂ ಹೆಮ್ಮೆ."

"ಆಗಲಪ್ಪಾ" ಎಂದು ಹೇಳಿದ. ತಂದೆಯವರ ತರ್ಕ ಅವನ ಮನಸ್ಸಿಗೆ ಹಿಡಿಯಲಿಲ್ಲ. ಅರ್ಥವಿಲ್ಲದ ಡಿಗ್ರಿಗಳನ್ನು ಹಚ್ಚಿಕೊಂಡು ಸರ್ಕಾರದ ಗುಲಾಮಗಿರಿ ಮಾಡಿದರೆ ವಂಶಕೀರ್ತಿ ಬೆಳೆಯುವ ಹಾಗಿದ್ದರೆ ಆ ಕೀರ್ತಿ ಸಾಧಿಸಲು ಅಷ್ಟೇನು ಯೋಗ್ಯವಾದುದಲ್ಲವೆಂದು ಅವನ ತರ್ಕ.

ನಿರೀಕ್ಷಿಸಿಕೊಂಡಿದ್ದ ಪರೀಕ್ಷೆ ಬಂದದ್ದೂ ಆಯಿತು, ಮುಗಿದದ್ದೂ ಆಯಿತು. ದೇವದಾಸ್ ತನಗೆ ಫಸ್ಟ್‌ಕ್ಲಾಸ್ ಖಂಡಿತ ಎಂದು ಸಾರಿದ. ಸೀತಾರಾಮು ಒಂದು ಸೆಕಂಡ್ ಕ್ಲಾಸು ಬಂದರೂ ಬರಬಹುದು ಎಂದ. ತಿರುಮಲ, ಅಚ್ಯುತ ಪ್ಯಾಸಾಗತ್ತೆ ಎಂದು ಧೈರ್ಯವಾಗಿದ್ದರು. ರಾಜ ಮಾತ್ರ "ನಾನು ಪ್ಯಾಸಾದರೆ ಅದು ಈ ಶತಮಾನದ ದೊಡ್ಡ ಪವಾಡ" ಎಂದು ಇದ್ದುದನ್ನು ಇದ್ದಂತೆಯೇ ಹೇಳಿದ.

ಪರೀಕ್ಷೆಯ ಕಳವಳ ಮುಗಿಯಲು ಯೂನಿಯನ್ನಿಗೆ ಮತ್ತೆ ರೆಕ್ಕೆಪುಕ್ಕ ಹುಟ್ಟಿಗೊಂಡಿತು. ಗೆಳೆಯರ ಜತೆಗೆ ಇತರ ಕೆಲವರೂ ಕೂಡಿಕೊಂಡರು.

ಪಿಟೀಲಿಗೆ ಮುನಿಯಪ್ಪನನ್ನೂ ಮೃದಂಗಕ್ಕೆ ರಾಮಯ್ಯನನ್ನೂ ತೆಗೆದು ಕೊಂಡರು. ನಾಟಕಾಭ್ಯಾಸ ಒಳ್ಳೆಯ ಭರದಲ್ಲಿ ಸಾಗಿತು. ಶಾಕುಂತಲ ಜತೆಗೆ "ರಾಮವರ್ಮ-ಲೀಲಾವತಿ"ಯನ್ನೂ ಅಭ್ಯಾಸಕ್ಕೆ ತೆಗೆದುಕೊಳ್ಳ ಲಾಯಿತು. ಗೆಳೆಯರು ಎಲ್ಲಾ ವ್ಯವಸ್ಥೆಯನ್ನು ನೋಡಿಕೊಂಡು ಬುಳ್ಳಪ್ಪನ ಕಂಪೆನಿ ಬರುವುದನ್ನೇ ಎದುರು ನೋಡುತ್ತ ಕುಳಿತರು.

ರಾಜಾನಕುಂಟೆ ಬಳ್ಳಪ್ಪನ "ಶ್ರೀ ರಾಜರಾಜೇಶ್ವರಿ ಕರ್ಣಾಟಕ ನಾಟಕ ಸಭಾ" ಇತಿಹಾಸಪ್ರಸಿದ್ಧವಾಗಿತ್ತು. ಬಯಲು ನಾಟಕದ ದೆಸೆಯಿಂದ ಅದು ಮೇಲಕ್ಕೆದ್ದು ಹತ್ತಾರು ಫರದೆಗಳ ಕಂಪೆನಿಯಾಗಿತ್ತು. ಅರವತ್ತು ಎಪ್ಪತ್ತು ನಟರಿಗೆ ಆಶ್ರಯಸ್ಥಾನವಾಗಿತ್ತು. ನಾಟಕದಲ್ಲಿ ಮೊದಲು ಡೈನಮೊ ತಂದು ಎಲೆಕ್ಟ್ರಿಕ್ ದೀಪಗಳನ್ನು ಹಚ್ಚಿದ ಕೀರ್ತಿಯೂ ಬುಳ್ಳಪ್ಪನಿಗೆ ಸೇರಿತ್ತು. ಬುಳ್ಳಪ್ಪ ಧೈರ್ಯಶಾಲಿ, ಸಾಹಸಿ. ಕಂಪೆನಿ ಹಲವು ಸಾರಿ ದಿವಾಳಿ ತೆಗೆದಿದ್ದರೂ ಮತ್ತೆ ಮತ್ತೆ ಕೂಡಿಸಿ ಹದಿನೇಳು ವರ್ಷಗಳಿಂದ ನಡಸಿಕೊಂಡು ಬಂದಿದ್ದ.

ಜನ ಪ್ರೀತಿಯಿಂದ ಬುಳ್ಳಪ್ಪನ ಹೆಸರನ್ನು ಕುಂಟ ಬುಳ್ಳಪ್ಪ ಎಂದು ಮಾರ್ಪಾಟು ಮಾಡಿದ್ದರು. ಬುಳ್ಳಪ್ಪನ ಒಂದು ಕಾಲೇನೋ ಸ್ವಲ್ಪ ಕುಂಟು. ಆದರೆ ಪಾರ್ಟುಮಾಡುವಾಗ ಕುಂಟು ಕಾಲನ್ನೇ ಅಭಿನಯಕ್ಕೆ ಉಪಯೋಗಿಸಿ ಕೊಂಡು, ತನ್ನದೇ ಆದ ಒಂದು ನವೀನ ನಡಿಗೆಯನ್ನು ನಿಯೋಜಿಸಿಕೊಂಡಿ ದ್ದನು. ಇತರ ಕಂಪೆನಿಗಳ ನಟರು ಅದನ್ನು ನೋಡಿಕೊಂಡು ತಾವು ಬುಳ್ಳಪ್ಪನ ಹಾಗೆ ನಡೆಯುವುದು ಅಭಿನಯದ ವೈಶಿಷ್ಟ್ಯ ಎಂದು ಭಾವಿಸಿಕೊಂಡಿದ್ದರು.

ಕಂಪೆನಿ ಮಾಲೀಕನಾದವನು ಅದರ ಮುಖ್ಯ ಪಾತ್ರಗಳನ್ನು ಅಭಿನಯಿಸುತ್ತಿದ್ದುದು ವಾಡಿಕೆ. ಬುಳ್ಳಪ್ಪ ರಾವಣ, ಹಿರಣ್ಯಕಶಿಪು, ವಾಲಿ, ಕಂಸ ಮೊದಲಾದ ಪಾತ್ರಗಳನ್ನು ಮಾಡುತ್ತಿದ್ದನು. ಎರಡನೆಯ ರಾಜಾ ಪಾರ್ಟುಗಳು (ಮುಖ್ಯ ಪಾತ್ರಗಳು) ರಾಮ, ಹಿರಣ್ಯಾಕ್ಷ, ಸುಗ್ರೀವ, ಕೃಷ್ಣ ಇವೆಲ್ಲಾ ಸೂರಪ್ಪನ ಪಾಲಿಗೆ ಬೀಳುತ್ತಿದ್ದವು. ಮಾತೆತ್ತಿದರೆ ಸುಡುಗಾಡು, ಸುಡುಗಾಡು ಎನ್ನುತ್ತಿದ್ದುದರಿಂದ ಸೂರಪ್ಪನಿಗೆ 'ಸುಡುಗಾಡು ಸೂರಪ್ಪ' ಎಂಬ ಹೆಸರೇ ನಿಂತುಹೋಗಿತ್ತು. ರಾಣಿ ಪಾರ್ಟುಗಳನ್ನು

ಅತ್ತಿಗುಪ್ಪೆ ನೀಲಕಂಠ ಮಾಡುತ್ತಿದ್ದ. ಅವನು ಸ್ತ್ರೀಪಾತ್ರಗಳನ್ನು ಮಾಡುವ ವಯಸ್ಸು, ಆಕಾರಗಳನ್ನು ಮೀರಿದ್ದರೆ ಹೆಣ್ಣಿನ ಕಂಠವಿದ್ದುದರಿಂದ ಅವನ ಅಭಿನಯವನ್ನು ಪ್ರೇಕ್ಷಕರು ಸಹಿಸಿಕೊಂಡು ಹೋಗುತ್ತಿದ್ದರು. ನಕಲಿ ಪಾತ್ರಗಳೆಲ್ಲಾ ವೆಂಕೋಬನ ಮೀಸಲು. ಅವನ ಹಾಸ್ಯ ಅರ್ಥವಾಗುತ್ತಿದ್ದುದು ಅವನಿಗೇ, ಮೆಚ್ಚುಗೆಯಾಗುತ್ತಿದ್ದುದು ಬುಳ್ಳಪ್ಪನಿಗೆ. ಇವರಲ್ಲದೆ ವೇದಾಂತದ ವೆಂಕಣ್ಣ, ನಟ ಭಯಂಕರ ಪುಟ್ಟುರಾಯ, ಮಕ್ಕಳ ಪಾರ್ಟಿನ ಶಿವೂ ಕೂಡ ಕಂಪೆನಿಯಲ್ಲಿ ಹೆಸರಾಗಿದ್ದರು.

ರಾಜರಾಜೇಶ್ವರಿ ಕಂಪೆನಿ ಬಹಳ ವೈಭವದಿಂದ ಬಾಜಾಬಜಂತ್ರಿ ಮಾಡಿಸಿಕೊಂಡು ಬೆಂಗಳೂರಿಗೆ ಬಂತು. ಮೂರು ತಿಂಗಳ ಕಾಲ ತುಲಸೀ ತೋಟದ ನಾಟಕ ಶಾಲೆಯನ್ನು ಬಾಡಿಗೆಗೆ ಹಿಡಿದು, ಕಂಪೆನಿಯ ಜನ ವಾಸಮಾಡಲು ಕವಾಡಿಗರ ಪೇಟೆಯಲ್ಲಿ ಒಂದು ಮಾಳಿಗೆ ಮನೆ ಹಿಡಿದು ಬಳ್ಳಪ್ಪನವರು ನಿಂತರು. ಊರಿನಲ್ಲೆಲ್ಲಾ ರಾಜರಾಜೇಶ್ವರಿಯವರ ಮೊದಲನೆಯ ನಾಟಕ 'ಸಂಪೂರ್ಣ ರಾಮಾಯಣ'ವೆಂದು ಡಂಗುರ ಸಾರಲಾಯಿತು

ತುಲಸೀತೋಟದ ನಾಟಕಶಾಲೆ ಕಿತ್ತುಹೋಗುವಷ್ಟು ಜನಸಂದಣಿ. ರಾಜಾ, ಅಚ್ಯುತ ನುಗ್ಗುವವರ ಜತೆ ನುಗ್ಗಿಕೊಂಡು ಹೋಗಿ ಒಂದೊಂದು ರೂಪಾಯಿ ಕೊಟ್ಟು ತಮ್ಮ ಸ್ಥಳಗಳನ್ನು ಭದ್ರಪಡಿಸಿಕೊಂಡರು. ಮೊದಲಿನ ಕುರ್ಚಿ ಸಾಲುಗಳೆಲ್ಲಾ ತುಂಬುತ್ತಿದ್ದವು. ಯಾರನ್ನು ನೋಡಲಿ 'ಪಾಸು' ತೋರಿಸಿ ಬರುವವರೇ ಆಗಿದ್ದರು. ದೊಡ್ಡ ದೊಡ್ಡ ಜರತಾರಿ ರುಮಾಲಿನ ಅಧಿಕಾರಿಗಳು, ಕೆಂಪು ಹಸಿರು ಶಾಲು ಹೊದೆದು ಕೈಗೆ ಚಿನ್ನದ ಗಟ್ಟಿ ಕಪ್ಪ ಹಾಕಿದ ಮಂಡಿ ವರ್ತಕರು, ಪೋಲೀಸ್ ಇಲಾಖೆಯವರು, ಕೋರ್ಟಿನವರು ಮಾನ್ಯಪ್ರೇಕ್ಷಕ ವರ್ಗದಲ್ಲಿ ತುಂಬಿದ್ದರು.

ನಾಟಕ ಹತ್ತು ಗಂಟೆಗೆಂದು ಪ್ರಕಟವಾಗಿತ್ತು. ಹನ್ನೊಂದಾಯಿತು, ಹನ್ನೊಂದೂವರೆಯಾಯಿತು. ತೆರೆ ಮೇಲಕ್ಕೇಳಲಿಲ್ಲ. ಅಂಕದ ಪರದೆ ನೋಡಿ ನೋಡಿ ಪ್ರೇಕ್ಷಕರಿಗೆ ಸಾಕಾಗಿ ಹೋಗಿತ್ತು. ಪರದೆಯ ಮೇಲೆ ರಾಜರಾಜೇಶ್ವರಿಯ ಮೂರ್ತಿ. ಪ್ರಾಯಶಃ ಚಿತ್ರಗಾರ ರಾಣೀ ಪಾರ್ಟು ನೀಲಕಂಠನನ್ನೇ ವೇಷಹಾಕಿ ಕೂಡಿಸಿ ರಾಜರಾಜೇಶ್ವರಿಯ ಚಿತ್ರವನ್ನು ತೆಗೆದಿದ್ದನೋ ಏನೋ?

ಮೇಲಟ್ಟ (Gallery) ದಲ್ಲಿದ್ದ ಎರಡಾಣೆ, ನಾಲ್ಕಾಣೆ ಪ್ರಭುಗಳು ತಮ್ಮ ನಾಟಕವನ್ನಾರಂಭಿಸಿದರು. ಸೀಟಿಗಳಾದವು. ನಾಯಿ ಬೆಕ್ಕುಗಳ ಕೂಗುಗಳಾದವು. "ನಾಟಕ ಷುರು ಮಾಡ್ರೋ—" "ನಿದ್ದೆ ಹೊಡೀತಾ ಇದ್ದೀರೇನ್ರೋ" ಮೊದಲಾದ ಸಂದೇಶಗಳಾದವು. ಯಾವದಕ್ಕೂ ಬುಳ್ಳಪ್ಪನೇನೋ ಅಲುಗಾಡಲಿಲ್ಲ. ತೆರೆ ಗಾಳಿಗೊಮ್ಮೆ ಅಲುಗಾಡಿದರೆ ಇನ್ನೇನು ನಾಟಕ ಮೊದಲಾಗುವುದೆಂದು ಜನ ಸುಮ್ಮನಾಗುತ್ತಿದ್ದರು. ಅವರ ಜತೆಯಲ್ಲಿಯೂ ತೆರೆಯೂ ಸುಮ್ಮನಾಗಿ ಬಿಡುತ್ತಿತ್ತು. ಜನ ತಮ್ಮ ಶುಭ್ರವಾದ ಭಾಷೆಯನ್ನು ಆರಂಭಿಸಿದರು. ಆಗ ಗಣಗಣಾಂತ ಮೊದಲನೆಯ ಗಂಟೆ ಬಾರಿಸಿತು. ಜನ ಸುಮ್ಮನಾದರು. ಮತ್ತೆ ಯಥಾಪ್ರಕಾರ ಜನಗಳ ಗೊಂದಲವಾರಂಭವಾಯಿತು. ಎರಡನೆಯ ಗಂಟೆ ಬಾರಿಸಿತು. 'ಇನ್ನೇನು ನಾಟಕ ಆರಂಭವಾಗುತ್ತೆ' ಎನ್ನುವ ಧೈರ್ಯ ಜನಗಳ ಮನಸ್ಸಿನಲ್ಲಿ ಬಂತು.

ನಾಟಕವನ್ನು ನಿಧಾನಮಾಡಿ ಜನಗಳಿಗೆ ಬೇಸರವನ್ನುಂಟುಮಾಡ ಬೇಕೆಂದು ಬುಳ್ಳಪ್ಪನ ಇಚ್ಛೆಯಾಗಿರಲಿಲ್ಲ. ಮೊದಲನೆಯ ದೃಶ್ಯ ಕ್ಷೀರಸಾಗರ. ದೇವಾದಿ ದೇವತೆಗಳೂ, ಮಹಾಮಹಾ ಋಷಿಗಳೂ ಶ್ರೀಮನ್ನಾರಾಯಣನಲ್ಲಿ ಹೋಗಿ ಮೊರೆ ಇಡುತ್ತಾರೆ:

"ಸ್ವಾಮಿ, ಭೂಲೋಕದಲ್ಲಿ ರಾವಣ, ಕುಂಭಕರ್ಣ ಎಂಬಿಬ್ಬರು ದೈತ್ಯರು ಅನಾಹುತ ಮಾಡುತ್ತಿದ್ದಾರೆ. ಧರ್ಮ ಖಿಲವಾಗುತ್ತದೆ. ಯಜ್ಞ ಯಾಗಾದಿಕರ್ಮಗಳನ್ನು ಮಾಡಲಾಗದಂತೆ ಹಾವಳಿಮಾಡುತ್ತಿದ್ದಾರೆ"

ಅದೇ ಸಮಯಕ್ಕೆ ಸ್ವಾಮಿಯ ದರ್ಶನಾರ್ಥಿಯಾಗಿ ಬಂದ ಅಂತರ-ರಾಷ್ಟ್ರೀಯ ಸುದ್ದಿಗಾರ ನಾರದನೂ ಅವರ ಮಾತನ್ನೇ ಒತ್ತಿ ಹೇಳಿ, "ತಾವು ಅವತಾರ ಮಾಡಿ ಧರ್ಮೋದ್ಧಾರ ಮಾಡಬೇಕು" ಎಂದು ಸಲಹೆ ಕೊಡುತ್ತಾನೆ.

ಸ್ವಾಮಿ ಯೋಚನೆಮಾಡುತ್ತಾನೆ. ಕ್ಷೀರಸಾಗರದ ಮೇಲೆ ಮಲಗಿ ಮಲಗಿ ತನಗೂ ಸೊಂಟ ಒಡತ ಬಂದಿತ್ತು. ಇದರಿಂದ ಒಂದಿಷ್ಟು ವ್ಯಾಯಾಮವಾದ ಹಾಗಾಗುತ್ತದೆಂದು ಭಕ್ತಾದಿಗಳಿಗೆ ಅಭಯಕೊಟ್ಟು ಭೂಲೋಕಕ್ಕೆ ಲಕ್ಷ್ಮೀಸಮೇತನಾಗಿ ಪ್ರಯಾಣ ಬೆಳೆಸುತ್ತಾನೆ.

ನಾರಾಯಣನ ಪಾತ್ರಮಾಡುತ್ತಿದ್ದ ನರಸಪ್ಪನಿಗೆ ಬುಳ್ಳಪ್ಪನವರು ಹಿಂದಿನ ಕ್ಯಾಂಪಿನದು ರೂ. ೩೦೦ರಷ್ಟು ಬಾಕಿ ಕೊಡಬೇಕಾಗಿತ್ತು. ಅದನ್ನು

ಪೂರ್ಣ ಸಲ್ಲಿಸಿದ ಹೊರತು ತಾನು ಬಣ್ಣ ಮುಟ್ಟುವುದಿಲ್ಲವೆಂದು ಅವನು ವೀರಪ್ರತಿಜ್ಞೆ ಮಾಡಿ ಕುಳಿತುಬಿಟ್ಟಿದ್ದ. ಅವನ ಲೆಕ್ಕಾಚಾರ ತೀರಿದ ಮೇಲೆ ಮೊದಲನೆಯ ಗಂಟೆ ಬಾರಿಸಿತ್ತು. ಅವನು ಬಣ್ಣ ಬಳಿದುಕೊಂಡು, ವೇಷಧರಿಸಿ ಬಂದು ಕಾರ್ಡುಬೋರ್ಡ್ ಶಯನದ ಮೇಲೆ ಮಲಗಿದ. ಮೂರನೆಯ ಗಂಟೆ ಬಾರಿಸಿತು. ನಾಟಕ ಆರಂಭವಾಯಿತು.

ಋಷಿಗಳ ಮಾತಿಗೆ ನಾರಾಯಣ ದಾಕ್ಷಿಣ್ಯಕ್ಕೆ ಒಪ್ಪಿದ ಹಾಗಿತ್ತು. ಗೊಣಗುಟ್ಟುಕೊಳ್ಳುತ್ತಾ ನಾರಾಯಣ ಭೂಲೋಕದಲ್ಲಿ ರಾಮಾವತಾರ ಮಾಡುವದಕ್ಕೆ ಒಪ್ಪಿದನು.

ಅನಂತರ ಸೂತ್ರಧಾರ, ನಟಿಯರು ಬಂದು, ವಸಂತಋತುವನ್ನಧಿಕರಿಸಿ ಗಾನಮಾಡಿ, ಪ್ರೇಕ್ಷಕ ವರ್ಗಕ್ಕೆ ನಮಿಸಿ, ರಾಮಾಯಣದ ಕಥೆಯನ್ನು ನಿರೂಪಿಸಿ ಮತ್ತೆ ಒಂದೆರಡು ಹಾಡುಗಳನ್ನು ಹೇಳಿ ಸಭಾಸದರನ್ನು ರಂಜಿಸಿ ತೆರಳಿದರು.

ರಾವಣ, ಕುಂಭಕರ್ಣಾದಿಗಳ 'ದರ್ಬಾರ್' ವೈಭವದಲ್ಲಿ ಆರಂಭವಾಯಿತು. ವಂಧಿಮಾಗಧರ ಕೈಯಲ್ಲಿ ಹೊಗಳಿಸಿಕೊಳ್ಳುತ್ತಾ ರಾವಣ ಪ್ರವೇಶಿಸುತ್ತಲೂ ಸಭೆ ಪ್ರಚಂಡ ಕರತಾಡನಮಾಡಿತು. ಹತ್ತು ತಲೆಗಳನ್ನು ಹೊತ್ತು ಬುಳ್ಳಪ್ಪನೇ ರಾವಣನ ವೇಷ ಧರಿಸಿ ಬಂದಿದ್ದ. ಎದೆಯ ಮೇಲೆ ಮೆಡಲುಗಳ ಪ್ರದರ್ಶನವಾಗಿತ್ತು. ಅವನ ಶೌರ್ಯ ಪ್ರತಾಪಗಳನ್ನು ಕೇಳಿ ಆಸ್ಥಾನದವರು ನಡುಗುವುದು ಹಾಗಿರಲಿ, ಸಭೆಗೆ ಸಭೆಯೇ ನಡುಗಿಬಿಟ್ಟಿತು. "ಕುಟ್ಟುತೆ, ಪುಡಿಗುಟ್ಟುತೆ, ದೇವಾದಿದೇವತೆಗಳಾ" ಎಂಬ ಕಂದವನ್ನು ತಾರಸ್ಥಾಯಿಯಲ್ಲಿ ಬುಳ್ಳಪ್ಪ ಹಾಡಿದಾಗ ನಾಟಕದ ಚಪ್ಪರದ ಝಿಂಕ್ ತಗಡುಗಳೆಲ್ಲಾ ಒಮ್ಮೆ ಮೇಲಕ್ಕೆ ಹಾರಿ ಮತ್ತೆ ಸ್ವಸ್ಥಾನಗಳಲ್ಲಿ ಬಂದು ಕುಳಿತವು.

"ಪಾಲ್ಟೊಂದ್ರೆ ಬುಳ್ಳಣ್ಣನ ಪಾಲ್ಟೇಪಾಲ್ಟು" ಎಂದು ಅಟ್ಟದ ಜನ ಮೆಚ್ಚಿಕೊಂಡಿತು.

ಜನಕ ಮಹಾರಾಜನ ಅಂತಃಪುರ. ಸೀತೆಯ ಸಖಿಯರು ಅವಳಿಗೆ ಬೇರೆ ಬೇರೆ ದೇಶದ ರಾಜಕುಮಾರರ ಚಿತ್ರಗಳನ್ನು ತೋರಿಸಿ "ಯಾರನ್ನು

ವರಿಸುತ್ತೀ" ಎಂದು ಕೇಳುತ್ತಿದ್ದರು. ಸೀತೆ ಅವರನ್ನು ಟೀಕಿಸುತ್ತಾ 'ಒಲ್ಲೆ'ಯೆನ್ನುತ್ತಿದ್ದಳು. ಅತ್ತಿಕುಪ್ಪೆ ನೀಲಕಂಠ ಆ ಪಾರ್ಟನ್ನು ೩೦ ವರ್ಷಗಳಿಂದ ಮಾಡುತ್ತಿದ್ದ. ನೋಟಕರು ಆ ಹೆಣ್ಣುಮಗಳನ್ನು ಸೀತೆಯ ತಾಯಿ ಅಥವಾ ಅಜ್ಜಿಯೆಂದು ಭಾವಿಸಿಕೊಂಡಿದ್ದರು. ಆದರೆ ಸಖಿಯರು ಪದೇಪದೇ ಅವಳನ್ನೇ "ಸೀತಾ, ಸೀತಾ" ಎಂದು ಸಂಬೋಧಿಸುತ್ತಿದ್ದುದರಿಂದ, ಅವಳನ್ನೇ ಸೀತೆಯೆಂದು ಒಪ್ಪಿಕೊಂಡರು. ಅವರಲ್ಲಿ ಒಬ್ಬ "ಮುದಿ ಹಂಕ, ಸೀತೆ ಪಾಲ್ಟು ಮಾಡ್ತಾನೆ" ಅಂದ.

ಅವನ ಪಕ್ಕದಲ್ಲಿ ಕೆಂಪುಶಾಲು ತಲೆಗೆ ಸುತ್ತಿಕೊಂಡು ಕುಳಿತಿದ್ದ ಒಬ್ಬ ರಸಿಕ ಅವನ ತಲೆಯ ಮೇಲೆ ಮುಟ್ಟಿ, "ಕೂಡ್ಲೇ ಅವನು ಅತ್ತಿಕುಪ್ಪೆ ನೀಲಕಂಠ, ಅಂಗೆ ಪಾಲ್ಟುಮಾಡೋದು ನಮ್ಮ ಸೀಮೇಲೇ ಇಲ್ಲ" ಎಂದ.

ವಿಮರ್ಶಕ ನಿರುತ್ತರನಾಗಿ "ಅಂಗಾ, ವೈನವಾಗಿ ಪಾಲ್ಟೀನೋ ಮಾಡ್ತಾನೆ. ಸಂದಾಕಿ ಆಡ್ತಾನೆ" ಎಂದು ನೀಲಕಂಠನ ಗುಣಕಥನದಲ್ಲಿ ಮಗ್ನನಾಗಿಬಿಟ್ಟ.

ವೆಂಕೋಬ ನಕಲಿ ಪಾರ್ಟುಗಳಿಗೆ ಬಹಳ ಹೆಸರುವಾಸಿಯಾಗಿದ್ದ. ಅದರಲ್ಲಿಯೂ ಅವನ 'ಹನುಮಂತನ ಯಾಸ' ನೋಡೋದಕ್ಕೆ ಮೂರು ದಿವಸ ಮುಂಚೆ ಬುತ್ತಿ ಕಟ್ಟಿಕೊಂಡು, ಗಾಡಿ ಹೊಡೆದುಕೊಂಡು ಹಳ್ಳಿಯ ಜನ ಬರುತ್ತಿತ್ತು. ಸ್ವಲ್ಪ ಹೊರಗೆ ನೋಡುವುದಕ್ಕೂ ವೆಂಕೋಬ ಹನುಮಂತನ ಹಾಗೇ ಇದ್ದ. ಅವನು ಯಾವ ವೇಷ ಮಾಡಿದರೂ 'ಹನುಮಂತ'ನೇ ಆಗಿರುತ್ತಿದ್ದುದರಿಂದ ಅವನ ಹನುಮಂತ ಜನಗಳ ವಿಶೇಷ ಮೆಚ್ಚುಗೆಗೆ ಪಾತ್ರವಾದುದೇನೂ ಹೆಚ್ಚಲ್ಲ. ಒಂದು ಸಲ ಅವಸರದಲ್ಲಿ ಬುಳ್ಳಪ್ಪನ ಕಂಪೆನಿಯವರು ವಿದುರಾಶ್ವತ್ಥದಲ್ಲಿ 'ಲಂಕಾದಹನ' ಆಡಬೇಕಾಗಿ ಬಂತು. ರಂಗಕ್ಕಷ್ಟು ಅಟ್ಟ ಕಟ್ಟಿ ಬಯಲಿನಲ್ಲಿಯೇ ನಾಟಕವನ್ನು ಹಾಕಿಬಿಟ್ಟರು. ಆಗ ಅಲ್ಲಿದ್ದ ಕಪಿಗಳೆಲ್ಲಾ ವೆಂಕೋಬನ 'ಹನುಮಂತ ಯಾಸ' ನೋಡುತ್ತಾ ಕುಳಿತವಂತೆ. ಮೊದಲನೆಯ ದಿವಸದಿಂದ ಕಪಿಗಳು ತಮ್ಮ ಸಹಜಚರ್ಯೆಯನ್ನು ಬಿಟ್ಟು ವೆಂಕೋಬನ ಹಾಗೆ ಚೇಷ್ಟೆ ಮಾಡತೊಡಗಿದವಂತೆ. ಅವನ ಬಾಯಲ್ಲಿ ಶಕಾರ ಷಕಾರಗಳು ನುಡಿಯುತ್ತಿರಲಿಲ್ಲ. ಯಾರಾದರೂ ಆ ಬಗ್ಗೆ ಪ್ರಶ್ನೆ ಕೇಳಿದರೆ 'ಅನುಮಂತ ಇಂಗೇ ಮಾತಾಡ್ತಿರ್ಲಿ

ಲ್ಲಾಂತ ಏನು ಗೊತ್ತು ಎಂದು ಲಾಯರ್ ಪೈಂಟಾಕಿ ಅವರ ಬಾಯಿ ಮುಚ್ಚಿಸುತ್ತಿದ್ದನು.

ಬಣ್ಣದ ಕೋಣೆಯಲ್ಲಿ ಟೀ, ಕಾಫಿ ವ್ಯವಸ್ಥೆಗಳಿರಲಿಲ್ಲ. ಟೀ, ಕಾಫಿ ಕುಡಿದು ಜನ ಹಾಳಾಗ್ತಾರೆ ಎಂದು ಬುಳ್ಳಪ್ಪ ಅವುಗಳನ್ನು ಧಿಕ್ಕರಿಸುತ್ತಿದ್ದ. ಒಂದು ಮಕ್ಕರಿ ತುಂಬ ಕಳ್ಳೆ ಗುಗ್ಗರಿ, ಎರಡು ದೊಡ್ಡ ನೊಗೆಗಳಲ್ಲಿ ಹೆಂಡ ನಟರಿಗೆ ಸಿದ್ಧವಾಗಿರುತ್ತಿತ್ತು. 'ಔಸ್ತಿ' ಬರುವ ತನಕ ರಾಮ ಪಾರ್ಟಿನ ಸೂರಪ್ಪ, ವೆಂಕೋಬ, ನೀಲಕಂಠ ಬಣ್ಣವನ್ನೇ ಮುಟ್ಟುತ್ತಿರಲಿಲ್ಲ. ಮಿಕ್ಕವರು ಬಣ್ಣ ಹಾಕಿಕೊಂಡಿದ್ದರೂ, ಔಸ್ತಿ ತೆಗೆದುಕೊಳ್ಳದೆ ರಂಗಭೂಮಿ ಪ್ರವೇಶಿಸುತ್ತಿರಲಿಲ್ಲ. ಯಜಮಾನ ಬುಳ್ಳಪ್ಪ ಮಾತ್ರ ಒಳಗೇ ತರಿಸಿಕೊಂಡು ತಂಪಾಗಿ ಬರುತ್ತಿದ್ದ. ಯಜಮಾನ್ರು ಮತ್ತು ನೀಲಕಂಠನಿಗೋಸ್ಕರ 'ಸ್ಪೆಶಲ್' ಆಗಿ ಹಸೀಮಾಂಸದ ತುಂಡುಗಳು ನೆಂಚಿಕೊಳ್ಳುವುದಕ್ಕೆ ಬರುತ್ತಿತ್ತು.

ನಾಟಕ ಮುಗಿಯುವ ಹೊತ್ತಿಗೆ ದಿಗಂತದಲ್ಲಿ ಅರುಣಚ್ಛಾಯೆ ಮೂಡಿತ್ತು. ಸ್ವಕಾರ್ಯದ ಸಲುವಾಗಿ ರಾಜಾ, ಅಚ್ಯುತ ನಾಟಕಕ್ಕೆ ಬಂದಿದ್ದುದರಿಂದ ಅವರು ನಾಟಕ ಮುಗಿಯುವವರೆಗೆ ಕೂಡಬೇಕಾಯಿತು. ಮಂಗಳ ಹಾಡಿಯಾಯಿತು. ಜನಸಂದಣಿ ಕಡಿಮೆಯಾಗಲು ಗೆಳೆಯರು ದಾರಿ ಮಾಡಿಕೊಂಡು ನೇಪಥ್ಯದ ಕಡೆಗೆ ತೆರಳಿದರು. ಬಣ್ಣದ ಕೋಣೆ ದಿಕ್ಕುಪಾಲಾಗಿತ್ತು. ಬಣ್ಣ ಕೂಡ ಅಳಿಸದೆ ನಟರು ಸಿಕ್ಕಿದಲ್ಲಿ ಬಿದ್ದಿದ್ದರು. ಯಾವ ಸಾಮಾನು ಎಲ್ಲಿ ಅಂದರಲ್ಲೇ! ಮಣ್ಣು ಕುಡಿಕೆಗಳು ಸ್ಮಶಾನದಲ್ಲಿನ ನರಕಪಾಲಗಳಂತೆ ಹೆಜ್ಜೆಯಿಟ್ಟಲ್ಲಿ ಕಾಲಿಗೆ ಸಿಕ್ಕುತ್ತಿದ್ದವು. ಹೆಂಡದ ದುರ್ವಾಸನೆ ಮೂಗಿನ ಸೆಲೆಯನ್ನು ಒಡೆಯುತ್ತಿತ್ತು. ಕಂಪೆನಿಯ ಆಳು ಅವರನ್ನು ಕರೆದುಕೊಂಡು ಹೋಗಿ ಬುಳ್ಳಪ್ಪನವರನ್ನು ತೋರಿಸಿದ. ಯಜಮಾನರು ಆಳುಗಳ ಕೈಯಲ್ಲಿ ಬಣ್ಣ ತೆಗೆಸಿಕೊಳ್ಳುತ್ತಾ ಕಾಲೊತ್ತಿಸಿ ಕೊಳ್ಳುತ್ತಾ ಕುಳಿತಿದ್ದರು. ಪರಸ್ಪರ ಪರಿಚಯವಾದ ಮೇಲೆ "ನನ್ನಿಂದ ಏನಾಗ್ಬೇಕ್ರೀ?" ಎಂದರು.

"ಮುಂದಿನ ತಿಂಗಳ ಕೊನೆಗೆ ನಾವು ಶಾಕುಂತಲ ಆಡಬೇಕೊಂತ ಇದ್ದೀವಿ. ತಾವು ಪ್ರೋತ್ಸಾಹಿಸಬೇಕು."

"ಪ್ರೋತ್ಸಾಹಾಂದ್ರೆ ಎಂಗೆ?"

"ಒಂದು ದಿವಸದ ಮಟ್ಟಿಗೆ ನಾಟಕ ಮಂದಿರ, ಉಡುಪು, ಬಣ್ಣ ಎಲ್ಲಾ ಕೊಡಬೇಕು."

"ಬಾಡಿಗೆ"

"ನಾವು ಸಂಪಾದನೆಗೆ ಆಡುತ್ತಿಲ್ಲ, ಸಂತೋಷಕ್ಕೆ ಆಡ್ತೇವೆ. ಆದ್ದರಿಂದ............"

ಬುಳ್ಳಪ್ಪ ಸ್ವಲ್ಪಹೊತ್ತು ಯೋಚಿಸಿ "ದುಶ್ಯಂತ ಯಾರು ?" ಎಂದು ಕೇಳಿದ.

"ಇವರೇ" ಎಂದು ಅಚ್ಯುತ ರಾಜನನ್ನು ತೋರಿಸಿದ.

ಬುಳ್ಳಪ್ಪ ರಾಜನನ್ನು ತಲೆಯಿಂದ ಕಾಲಿನ ವರೆಗೂ ಮೂರುಸಲ ನೋಡಿ "ಸಂಗೀತ ಬತ್ತೈತೋ?"

"ಏನೋ ಸ್ವಲ್ಪ"

"ನಾನು ಮಾಡೋ ಯಾಸ ನೀವು ಮಾಡ್ತೀರಾ!"

"ಪ್ರಯತ್ನಿಸಿದ್ದೇನೆ. ನಿಮ್ಮಂತಹ ಹಿರಿಯರನ್ನು ನೋಡಿ ಆಸೆಯಾಯ್ತು."

"ಇವತ್ತು ಎಂಗಿತ್ರೀ ನನ್ನ ಪಾಲ್ಟು?"

ರಾಜ ಸ್ವಲ್ಪ ಹಿಂದು ಮುಂದು ನೋಡಿ "ಕೇಳಬೇಕೇ ಬುಳ್ಳಪ್ಪನವರೇ, ಸಾಕ್ಷಾತ್ ನಟರಾಜನೇ ಪಾರ್ಟು ಮಾಡಿದ ಹಾಗಿತ್ತು. ನೀವು ಬಹಳ ದೊಡ್ಡ ನಟರು. ನಮ್ಮ ದೇಶಕ್ಕೆ ಹೆಮ್ಮೆ."

"ಅಂಗಾದ್ರೆ ಚಂದಾಕಿತ್ತೂ ಅಂತೀರಾ?"

"ನಿಮ್ಮಂತಹ ನಟರು ಇಂಗ್ಲೆಂಡಿನಲ್ಲಿದ್ದರೆ ದೊರೆಗಳು ಟೈಟಲ್ ಕೊಡುತ್ತಿದ್ದರು."

ಬುಳ್ಳಪ್ಪನ ಹೃದಯ ಆನಂದದಿಂದ ಬಿರಿದು ಹೋಯಿತು.

"ನೀವು ದಿನಾ ಬರ್ಬೇಕ್ರೀ ನಮ್ಮ ನಾಟಕಕ್ಕೆ."

"ಆಗಲಿ."

"ಪಾಸು ಆಯ್ತೋ?"

ರಾಜ ಸುಮ್ಮನಿದ್ದ. ಬುಳ್ಳಪ್ಪ, ಗಂಟಲು ಕಿತ್ತುಹೋಗುವಂತೆ "ಶಿವಣ್ಣಾ" ಎಂದು ಕೂಗಿದ.

ಶಿವಣ್ಣ ಬರುತ್ತಲು "ಸ್ವಾಮಿಗಳಿಗೆ ಒಂದು ಪಾಸುಕೊಡು. ನಾಲಕ್ಕು ಜನಕ್ಕೇಂತ ಬರಿ" ಎಂದು ಆಜ್ಞಾಪಿಸಿದ.

"ಅದು ಸರಿ ಬುಳ್ಳಪ್ಪನವರೇ, ನಾನು ಪ್ರಾರ್ಥಿಸಿದ ವಿಚಾರ........?"

"ಆಡ್ಕೋಳಿ ಸ್ವಾಮಿ. ಒಂದಲ್ಲ ನಾಲಕ್ಕು ನಾಟಕ ಆಡಿಕೋಳಿ. ಮೊದಲೇ ಬಂದು ತಿಳಿಸಿಬಿಡಿ. ನಾನು ಎಲ್ಲಾ ತೈನಾತೂ ಕೊಡ್ತೇನೆ."

ಶಿವಣ್ಣ ಪಾಸೂ ತಂದುಕೊಟ್ಟ. ಬುಳ್ಳಪ್ಪನಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಿ ಗೆಳೆಯರು ಬೀಳ್ಕೊಂಡರು. ದಾರಿಯಲ್ಲಿ ಅಚ್ಯುತ ಮಾತನಾಡದೆಯೇ ಬರುತ್ತಿದ್ದುದನ್ನು ಕಂಡು ರಾಜ "ಏಕೆ ಅಚ್ಚು, ನಿದ್ದೆಯೋ, ಆಯಾಸವೋ ಏನು ಸಮಾಚಾರ?"

"ಎರಡೂ ಅಲ್ಲ, ಕೋಪ?"

"ಯಾರ ಮೇಲೆ?"

"ನಿನ್ನ ಮೇಲೆ."

"ನನ್ನ ಮೇಲೆ ಏಕಪ್ಪಾ ಕೋಪ?"

"ಆ ಬಾಲವಿಲ್ಲದ ಕಪಿಯನ್ನು ಅಷ್ಟು ಹೊಗಳಿದೆಯಲ್ಲಾ, ಅದು ಯಾವ ದೇವರಿಗೆ ಪ್ರೀತಿ?"

"ಮಂಕೇ—ಅಷ್ಟು ನಾನು ಮಾಡದಿದ್ದರೆ ಅವನು ಥಿಯೇಟರ್ ಬಿಟ್ಟು ಕೊಡ್ತಾ ಇದ್ದನೇನು? ಮೊದಲೇ ಕುಡಿದಿದ್ದ ಕಪಿ, ನಾನು ಸ್ವಲ್ಪ ಚೇಳು ಕುಟಕಿಸಿದಂತಾಯಿತು."

"ಏನಾದರೂ ನೀನು ಹಾಗೆ ಅಳತೆಗೆಟ್ಟು ಅವನನ್ನು ಹೊಗಳದಿದ್ದರೆ ಚೆನ್ನಾಗಿತ್ತು."

"ಪ್ರಪಂಚ ಇರುವುದೇ ಹೊಗಳಿಕೆಯಲ್ಲಯ್ಯಾ. ಅದರಿಂದ ನಮಗಾವ ನಷ್ಟವೇನು? ಬುಳ್ಳಪ್ಪನಿಗಂತೂ ಎಂಟನೆಯ ಸ್ವರ್ಗವೇ ಸಿಕ್ಕಿತು."

"ಅವನಿಗೆ ಎಂಟನೆಯ ಸ್ವರ್ಗ, ನಿನಗೆ ಮೊದಲನೆಯ ನರಕ."

"ಹುಚ್ಚ" ಎಂದು ರಾಜ ನಕ್ಕುಬಿಟ್ಟ.

೯

ರಾಜ ಪರೀಕ್ಷೆಗಂತೂ ಕೂಡಲೇಬೇಕಾಗಿತ್ತು. ಪರೀಕ್ಷೆಗೆ ತಪ್ಪಿಸಿಕೊಂಡರೆ ತಂದೆಯವರು ಕೋಪಮಾಡಿಕೊಳ್ಳುತ್ತಾರೆಂದು ಅವನಿಗೆ ಗೊತ್ತು.

ಹೇಗೂ ಕೊಡುವುದಾಗುತ್ತದೆ, ತೀರ್ಗಡೆಯಾದರೆ ಆಗಿಹೋಗಲಿ ಎಂದು ಪುಸ್ತಕಕ್ಕೆ ಕೈಹಾಕಿದ. ಓದುವುದಕ್ಕೆ ಸರ್ವಸಾಹಸ ಮಾಡಿದ. ಓದು ಸಾಗಿತು, ಆದರೆ ಓದಿದ್ದು ಬಾಯಲ್ಲಿಯೇ ಉಳಿಯಿತು. ಒಂದಕ್ಷರವೂ ಮನಸ್ಸನ್ನು ಮುಟ್ಟಲಿಲ್ಲ. ಅರ್ಧ ಪೂರ್ಣವಾಗಿದ್ದ "ಹ್ಯಾಂಲೆಟ್" ನಾಟಕವನ್ನಾದರೂ ಮುಗಿಸುವ ಎಂದು ತೆಗೆದುಕೊಂಡ, ಅದೂ ಕೆಲಸ ಸಾಗದಾಯಿತು. ರಾತ್ರಿ ಕಂಡ ಬುಳ್ಳಪ್ಪನ ನಾಟಕ, ಅವನ ಬಣ್ಣದ ಮನೆಯ ನೋಟಗಳೇ ಮತ್ತೆಮತ್ತೆ ಸ್ಮೃತಿಪಟಲದ ಮೇಲೆ ಸುಳಿಯು ತ್ತಿದ್ದವು. ನಾಟಕ ಜೀವನಕ್ಕೆ ತನ್ನ ಬಾಳನ್ನು ಮೀಸಲು ಮಾಡಬೇಕೆಂದಿದ್ದ ರಾಜನಿಗೆ ರಾತ್ರಿ ಕಂಡಿದ್ದ ನೋಟ ಸಿಡಿಲುಬಡಿದಂತಾಗಿತ್ತು. "ಅವರಲ್ಲಿ ನಾನೂ ಒಬ್ಬನಾಗುವುದೇ?" "ಬುಳ್ಳಪ್ಪ, ನೀಲಕಂಠ, ವೆಂಕೋಬ" ಮೊದಲಾದ ಜನರ ಜತೆಯಲ್ಲಿ ವ್ಯವಹಾರ ಮಾಡುವುದೇ? "ನೀತಿ-ನಡತೆಯ ಗಾಳಿಯೂ ಸುಳಿಯದ ಕಡೆಯಲ್ಲಿ ಬಾಳುವುದೇ?" "ಕಲೆಯೆಂದು ಭ್ರಾಂತ ನಾಗಿ ಆತ್ಮಘಾತಕ ಮಾಡಿಕೊಳ್ಳುವುದೇ?" ಎಂಬ ಪ್ರಶ್ನೆಗಳು ಅವನ ಹೃದಯದಲ್ಲಿ ಪ್ರಜ್ವಲಿಸುತ್ತಿತ್ತು.

"ಕಲೆಯನ್ನು ಆಶ್ರಯಿಸುವವರು ನೀಚರಾದರೆ ಅದರ ತಪ್ಪು ಕಲೆಯದೇ?"—"ಯೋಗ್ಯರು ಸೇರಲಿಲ್ಲವೆಂದೇ ಅದು ಬುಳ್ಳಪ್ಪನಂತಹವರ ಕೈಯಲ್ಲಿ ಸಿಕ್ಕಿರುವುದು—" "ನಾನೇಕೆ ಪರಿಸ್ಥಿತಿಯನ್ನು ಉತ್ತಮಗೊಳಿಸ ಬಾರದು?"—"ಆ ಮಹತ್ಕಾರ್ಯ ನನಗೇ ಏತಕ್ಕೆ ಮೀಸಲಾಗಿರಬಾರದು" ಎಂದು ಮಾರುತ್ತರ.

ಈ ಗೊಂದಲದಲ್ಲಿ ಆಲಿನ್ ಕ್ವಾರ್ಟರ್‌ಮೇನ್ ಆಡಿದ ಮಾತುಗಳು ಜ್ಞಾಪಕಕ್ಕೆ ಬಂದವು. "ಕಲಾದೇವತೆ ನಿಮ್ಮನ್ನು ಆಶ್ರಯಿಸಿದ್ದಾಳೆ. ನೀವು ಆಕೆಯನ್ನು ತಿರಸ್ಕರಿಸಕೂಡದು." ಎಷ್ಟು ಮರೆಯಲೆತ್ನಿಸಿದರೂ ಆಲಿನ್ನನ ಮಾತುಗಳು ಭೇರಿನಿನಾದದಂತೆ ಅವನ ಕಿವಿಯನ್ನು ತುಂಬುತ್ತಿತ್ತು. ನಾಟಕಕ್ಕೆ ತಾನು ಸೇರುವ ವಿಚಾರದಲ್ಲಿ ನೀಲನಿಗೆ ತಾನು ಹೇಳಿದ್ದ ಮಾತುಗಳು ಜ್ಞಾಪಕಕ್ಕೆ ಬಂದವು. "ನಮ್ಮಂತಹವರು ಅಲ್ಲಿ ಇಲ್ಲವೆಂದೇ ಅದರ ಸ್ಥಿತಿ ಇಷ್ಟು ಹಾಳಾಗಿರುವುದು"—ಈಗ, ತನ್ನ ನಿರ್ಧಾರಕ್ಕೆ ತಾನೇ ವಿರುದ್ಧವಾಗಿ ಹೋಗುವುದೇ?

ನಿಜ—ನಾಟಕಕ್ಕೆ ಸೇರುವುದರಿಂದ ಲೋಕದಲ್ಲಿ ಮರ್ಯಾದೆ ಉಳಿಯುವುದಿಲ್ಲ. ನಿಜ—ಸಾವಿರಾರು ರೂಪಾಯಿ ಸಂಪಾದಿಸಿ ಮಹಡಿ ಮನೆ ಕಟ್ಟಿಸಿ, ಮೋಟಾರಿನಲ್ಲಿ ತಿರುಗಾಡುವುದಕ್ಕಾಗುವುದಿಲ್ಲ. ಆದರೆ ಮನುಷ್ಯನ ನಿಜವಾದ ಸುಖ, ಸಂತೋಷಗಳು ಲೋಕದ ಮರ್ಯಾದೆ, ಮನೆ ಮೋಟಾರುಗಳಲ್ಲಿದೆಯೇ? ಶ್ರೀಮಂತಿಕೆಯ ಉಚ್ಚಶಿಖರದಲ್ಲಿರುವವರು ನಿಜವಾಗಿಯೂ ಸುಖಿಗಳಾಗಿದ್ದಾರೆಯೇ? ಲೋಕದ ಮರ್ಯಾದೆ-ಅದೊಂದು ಬಿಸಿಲ್ಗುದುರೆ. ಅದರ ಬೆನ್ನುಹತ್ತಿ ಹೋದವರು ಯಾರು ಊರ್ಜಿತ ರಾಗಿದ್ದಾರೆ! ಎಂದು ವಿಚಾರಗಳು ಸತತವಾಗಿ ಸುಳಿದವು. ಮನಸ್ಸು ಯಾವ ನಿಲುಗಡೆಗೂ ಬರಲೊಲ್ಲದು; ಯಾವದನ್ನೂ ಖಚಿತವಾಗಿ ಒಪ್ಪುವು ದಕ್ಕೆ ಧೈರ್ಯವಾಗದು. ಆಗ ನೀಲನ ನೆನಪಾಯಿತು. “ಅವಳನ್ನು ನೋಡಿ ಬಹಳ ದಿವಸವಾಯಿತು” ಎಂದು ಬಟ್ಟೆಹಾಕಿಕೊಂಡು, ನೀಲನ ಮನೆಯ ಕಡೆ ತೆರಳಿದ.

ಕಸೂತಿ ಚಿತ್ರದಲ್ಲಿ ನಿಮಗ್ನಳಾಗಿದ್ದ ನೀಲಾ, ರಾಜ ಬಂದುದನ್ನು ನೋಡಲಿಲ್ಲ. ಮೆಲ್ಲನೆ ಅವಳ ಹಿಂದೆ ನಿಂತು ಕಸೂತಿ ಚಿತ್ರವನ್ನು ನೋಡಿದ. ಅವಳು ಅವನ ಕಡೆ ತಿರುಗಿ ನೋಡುವ ಸಂದರ್ಭ ಕಾಣಲಿಲ್ಲ. ಅವಳ ಕಣ್ಣುಮುಚ್ಚಿದ. ನೀಲ ಕಸೂತಿಯನ್ನು ಬಿಟ್ಟು ಅವನ ಕೈಗಳನ್ನು ತನ್ನ ಕೈಗಳಿಂದ ಅಪ್ಪಿದಳು. ಅವನು ಕೈಗಳನ್ನು ಬಿಡಿಸುವುದಕ್ಕೆ ಪ್ರಯತ್ನಿಸಲಿಲ್ಲ. ರಾಜನೇ ಅವಳ ಕೈಹಿಡಿದು ಬಂದು ಪಕ್ಕದಲ್ಲಿ ಕುಳಿತು “ನನ್ನ ಕೈಯೇಕೆ ಬಿಡಿಸಲಿಲ್ಲ?”

“ನೀವು ಬಂದಿರುವುದು ಕನಸೋ ನನಸೋ ಗೊತ್ತಾಗಲಿಲ್ಲ. ಕಣ್ಣು ಬಿಟ್ಟ ಮೇಲೆ ನೀವಲ್ಲವೆಂದು ತಿಳಿದುಬಂದರೇನು ಗತಿ ಎಂದು ಭಯವಾಯಿತು. ಆ ಅಪ್ರಿಯ ಸತ್ಯ ನಿಧಾನವಾಗಿ ಹೊಳೆಯಲಿ ಎಂದು ತಡೆದೆ.”

“ಇದೇನು, ಬಹಳ ಕಸೂತಿಮಾಡುತ್ತಿರುವ ಹಾಗಿದೆಯಲ್ಲಾ,”

“ಇನ್ನೇನು ಮಾಡಲಿ. ಹೊತ್ತು ಹೋಗುವುದಿಲ್ಲ. ನಿಮಗೂ ಬೇಡವಾಗಿದ್ದೇನೆ—ಚಿತ್ರ ನೋಡಿದಿರಾ—ಹೇಗಿದೆ?”

“ಚೆನ್ನಾಗಿದೆ, ಆದರೆ ಜ್ವಾಲೆಗೆ ಬಂದು ಬೀಳುವ ಪತಂಗಗಳನ್ನೇಕೆ ಚಿತ್ರಿಸಬೇಕು.”

"ಇದು ನನ್ನ ಸ್ಥಿತಿಯನ್ನು ತೋರಿಸುತ್ತದೆ."

"ನಿನ್ನ ಸ್ಥಿತಿಯಲ್ಲ—ನನ್ನ ಸ್ಥಿತಿಯನ್ನು."

"ಹಾಗೆಂದರೆ?"

"ನಿನ್ನೆ ಬಳ್ಳಪ್ಪನ "ರಾಮಾಯಣ" ನೋಡುವುದಕ್ಕೆ ಹೋಗಿದ್ದೆ. ಅಲ್ಲಿನ ನೋಟವನ್ನೆಲ್ಲಾ ಕಂಡು ನನ್ನ ಮನಸ್ಸು ನಡುಗಿತು. ನಾನು ನಾಟಕ ಜೀವನಕ್ಕೆ ಬೀಳುವುದೆಂದರೆ ಬೆಂಕಿಗೆ ಬಿದ್ದ ಪತಂಗದ ಹಾಗೆ ಆಗುತ್ತದೆಯೇನೋ?"

"ಅನೇಕ ಸಲ ಬೆಂಕಿ ಆರಿಹೋಗುವುದೂ ಉಂಟು."

"ಅದು ನಿನ್ನ ಹುಚ್ಚು ಆಸೆ."

"ಕೊನೆಗೇನು ನಿರ್ಧರಿಸಿದಿರಿ."

"ನಿರ್ಧಾರ ನಿನಗೆ ಬಿಡೋಣವೆಂದು ಬಂದೆ."

"ನಾಟಕದ ಜೀವನ ಬಹಳ ಕಷ್ಟ. ನೀವು ವಿದ್ಯಾವಂತರು. ಸ್ವಲ್ಪ ಮನಸ್ಸುಮಾಡಿದರೆ ಬಿ. ಎ., ಎಂ. ಎ ಮಾಡಬಲ್ಲಿರಿ. ಯಾವದಾದರೂ ದೊಡ್ಡ ಕೆಲಸ ಸಿಕ್ಕಿಯೂ ಸಿಕ್ಕುತ್ತದೆ."

"ಹೌದು, ಆದರೆ ಮನುಷ್ಯನ ಧ್ಯೇಯವೆಲ್ಲಾ ಹಾಳು ಹೊಟ್ಟೆ ಹೊರೆದುಕೊಳ್ಳುವುದೇ?"

"ಇಲ್ಲ. ಅಧಿಕಾರ, ಸಂಪತ್ತು ನಿಮ್ಮಂತಹವರ ಕೈಗೆ ಸಿಕ್ಕಿದರೆ ಹತ್ತು ಜನಕ್ಕೆ ಉಪಕಾರವಾಗುತ್ತದೆ."

"ಅದು ಅಧಿಕಾರ ಸಂಪತ್ತು ಸಿಕ್ಕುವವರೆಗೆ ಮನುಷ್ಯ ಆಡುವ ಮಾತು. 'ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಬಹುದು. ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ' ಎಂದು ಬಸವಣ್ಣನವರು ಹೇಳಿರುವ ಮಾತಿನಲ್ಲಿ ತುಂಬ ಸತ್ಯವಿದೆ."

"ಹಾಗಾದರೆ ಏನು ಮಾಡಬೇಕೆಂದು ನಿಮ್ಮ ಯೋಚನೆ"

"ನಾಟಕ ಕಲೆ ನನ್ನ ಹೃದಯಮಂದಿರದ ದೇವತೆ. ನನ್ನ ತನುಮನವನ್ನೆಲ್ಲಾ ಅದರ ಸೇವೆಗೆ ಮೀಸಲು ಮಾಡಬೇಕೆಂದು ಆಸೆ. ಆದರೆ ಆ ಆಸೆ ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಾಗುವುದೋ ಇಲ್ಲವೋ ಎಂಬ ಸಂಶಯ — ಭಯ."

" ಮನುಷ್ಯನ ನಿರ್ಧಾರವನ್ನು ಮೀರಿದುದು ಯಾವದೂ ಇಲ್ಲ. "

" ನೋಡು, ವಿಧಿಕೂಡ ನನ್ನನ್ನು ಕೈಹಿಡಿದು ಅತ್ತಲೇ ಎಳೆದೊಯ್ಯುತ್ತಿದೆ. ನಿನ್ನೆ ಬುಳ್ಳಪ್ಪನನ್ನು ನಾಟಕ ಶಾಲೆ ಬೇಕೆಂದು ಕೇಳಿದೆ. ಕೂಡಲೆ ಒಪ್ಪಿದ. ಆ ದಾರಿಯಲ್ಲಿ ನನಗೆ ಬೇಕುಬೇಕಾದ ಅನುಕೂಲಗಳೆಲ್ಲಾ ಕೋರಿದ ಕೂಡಲೆ ದೊರೆಯುತ್ತಿದೆ. "

" ಹಾಗಾದರೆ ಏತಕ್ಕೆ ಯೋಚಿಸುತ್ತೀರಿ. ಲೋಕದಲ್ಲಿ ಸಾವಿರಾರು ಜನ ಶ್ರೀಮಂತರು, ಅಧಿಕಾರಿಗಳು ಆಗಿಹೋದರು. ನಾವು ಅವರು ಯಾರನ್ನೂ ಜ್ಞಾಪಿಸಿಕೊಳ್ಳುವುದಿಲ್ಲ. ಆದರೆ ಒಬ್ಬ ತ್ಯಾಗರಾಜ, ಒಬ್ಬ ಪುರಂದರದಾಸರ ಜಯಂತಿಗಳನ್ನು ಆಚರಿಸುತ್ತೇವೆ. "

" ಸತ್ಯವಾಗಿ ಹೇಳಿದೆ ನೀಲಾ, ದೊಡ್ಡ ತತ್ವವನ್ನು ಬೋಧಿಸಿದೆ. "

ಒಳಗಿನಿಂದ "ಅಮ್ಮಯ್ಯಾ" ಎಂದು ಕೂಗಿದ್ದು ಕೇಳಿಬಂತು. "ತಾಯಿ ಕರೆಯುತ್ತಿದ್ದಾಳೆ. ಒಳಗೆ ಹೋಗಿ ಬರುತ್ತೇನೆ" ಎಂದು ಎದ್ದು ಹೋದಳು. ಅವಳ ಆಡಿದ ಮಾತುಗಳಲ್ಲಿ ರಾಜನ ಮನಸ್ಸು ನೆಟ್ಟುಹೋಗಿತ್ತು. ಒಳಗೆ ತಾಯಿ, ಮಗಳು ಗಟ್ಟಿ ಗಟ್ಟಿಯಾಗಿ ಮಾತನಾಡುತ್ತಿದ್ದುದು ಕೇಳಿಬಂತು. ಮಾತುಗಳು ಸ್ಪಷ್ಟವಾಗಿ ಗೊತ್ತಾಗುತ್ತಿರಲಿಲ್ಲ. ಅವರ ಮಾತನ್ನು ಹೊಂಚಿ ಕೇಳಬಾರದೆಂದು ಕಿವಿಮುಚ್ಚಿಕೊಳ್ಳಲೆತ್ನಿಸಿದ, ಆದರೂ ಒಂದೊಂದು ಮಾತು ಕಿವಿಯನ್ನು ಮುಟ್ಟುತ್ತಿತ್ತು.

ನೀಲಾ ಸ್ವಲ್ಪ ಹೊತ್ತು ಕಳೆದ ಮೇಲೆ ಬಂದಳು. ಅವಳ ಮುಖ ಗಂಭೀರವಾಗಿ ಬಿಟ್ಟಿತ್ತು. ರಾಜಾ ಸ್ವಲ್ಪ ಆತುರದಿಂದ " ಏನು ಸಮಚಾರ ನೀಲಾ ? " ಎಂದ.

ಅವಳಿಂದ ಮಾರುತ್ತರ ಬರಲಿಲ್ಲ. ಅತ್ತು ಕಣ್ಣೊರಸಿಕೊಂಡು ಬಂದಿದ್ದುದು ಚೆನ್ನಾಗಿ ಕಾಣಬರುತ್ತಿತ್ತು.

" ಏನಾಯಿತು ? ಏಕೆ ಅತ್ತಿರುವೆ ? "

ನೀಲನ ಬಾಯಲ್ಲಿ ಮಾತು ಹೊರಡಲಿಲ್ಲ. ಕಣ್ಣುಗಳಿಂದ ಫಳಫಳನೆ ನೀರು ಹರಿಯಿತು.

" ಆದದ್ದೇನು ನೀಲಾ, ಇಷ್ಟು ದುಃಖಕ್ಕೇನು ಕಾರಣ ? "

“ಹೋಗಲಿ ಬಿಡಿ. ಆ ಮಾತು ಬೇಡ. ನೀವು ಬರೋದೇ ಅಪರೂಪ. ಆಗಲೂ ನಮ್ಮ ಗೋಳೇ ಆಗಬೇಕೇ?”

“ನೀನು ಎಲ್ಲಾ ವಿಷಯ ಬಾಯಿಬಿಟ್ಟು ಹೇಳದಿದ್ದರೆ ನನಗೆ ಸಮಾಧಾನವಾಗುವುದಿಲ್ಲ.”

“ಇನ್ನೇನು, ನಮ್ಮಮ್ಮನ ಗೋಳು. ಅವಳಿಗೆ ಧನಪಿಶಾಚಿ ಹಿಡಿದಿದೆ.”

“ಜಗತ್ತಿಗೇ ಹಿಡಿದಿದೆ. ಪಾಪ, ಅವಳನ್ನೇಕೆ ದೂಷಿಸುತ್ತೀ.”

“ನಾನು ಸುಖವಾಗಿರುವುದು ಅವಳಿಗೆ ಬೇಕಿಲ್ಲ.”

“ನಿನ್ನ ಸುಖಕ್ಕಿಂತ ಹೆಚ್ಚಿನದೇನಿದೆ ಅವಳಿಗೆ.”

“ರಾಜಾ, ನನಗೊಂದು ಭಿಕ್ಷೆ ನೀಡುತ್ತೀರಾ?”

“ಹೇಳು.”

“ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಿಬಿಡಿ.”

“ಎಲ್ಲಿಗೆ?”

“ನಿಮ್ಮ ಮನಸ್ಸು ಬಂದ ಕಡೆಗೆ.”

”ಹುಚ್ಚಿಯಂತಾಡಬೇಡ. ಸ್ವಲ್ಪ ಸಮಾಧಾನ ತಂದುಕೋ”

“ಸಮಾಧಾನದ ಸ್ಥಿತಿ ಮೀರಿದೆ. ನಿಮಗೂ ಬೇಡವಾದರೆ ಕೆರೆಯೋ ಭಾವಿಯೋ ಹುಡುಕಿಕೊಳ್ಳುತ್ತೇನೆ.”

“ತಾಯಿ-ಮಕ್ಕಳ ವ್ಯಾಜ್ಯ, ಎಷ್ಟು ಹೊತ್ತಿನದು. ಇನ್ನೊಂದರ ಗಳಿಗೆಯಲ್ಲಿ ಎಲ್ಲಾ ಸರಿಹೋಗುತ್ತದೆ.”

“ಇದು ಸರಿಹೋಗುವ ವ್ಯಾಜ್ಯವಲ್ಲ ದೊರೆ. ನೀವು ಕರೆದುಕೊಂಡು ಹೋಗುತ್ತೀರೋ ಇಲ್ಲವೋ ಹೇಳಿಬಿಡಿ. ನನಗೇನೂ ಬೇಕಿಲ್ಲ, ಎರಡು ಹೊತ್ತು ಊಟ, ವರ್ಷಕ್ಕೆ ಎರಡು ಸೀರೆಯಾದರೆ ಆಯಿತು.”

“ನಾನು ಸ್ವತಂತ್ರನಲ್ಲ ನೀಲಾ.”

“ಇಲ್ಲ, ಪ್ರಮಾಣವಾಗಿಯೂ ಅವರ ದಾರಿಯಲ್ಲಿ ನಾನು ಬರುವುದಿಲ್ಲ. ಅವರಿಗೆ ನಾನು ಎಂದೆಂದಿಗೂ ಮುಳ್ಳಾಗುವುದಿಲ್ಲ. ನನ್ನನ್ನು ಅವರ ಆಳಿನಂತೆ ಭಾವಿಸಿ. ನಿಮ್ಮ ಹತ್ತಿರ ಇದ್ದರೆ ಅಷ್ಟೇ ಸಾಕು. ಈ ಬಾಳು ನನಗೆ ಬೇಸರವಾಗಿದೆ. ಧನದಾಶೆಗೆ ನಾನು, ಈ ದೇಹವನ್ನು ಮಾರಲಾರೆ. ಇದು ನಿಮಗೆ ಮೀಸಲು............”

ರಾಜಾ ಚಕಿತನಾದ. ನೀಲನಿಗೆ ಯಾವ ರೀತಿಯಲ್ಲಿಯೂ ಸಮಾಧಾನ ಹೇಳಲಾಗದ ತನ್ನ ನಿಸ್ಸಹಾಯಕತೆಯನ್ನು ನೆನೆದು ಪರಿತಪಿಸಿದ. ಬೇರೆ ಏನೂ ತೋರದೆ ಅಲ್ಲಿಂದ ಎದ್ದ.

" ಬರುತ್ತೇನೆ. "

" ನನ್ನನ್ನು ಕೈಬಿಡುವಿರಾ ? "

" ಇಲ್ಲ. "

" ಹಾಗಾದರೆ "

" ಯೋಚಿಸಲು ಸ್ವಲ್ಪ ಅವಕಾಶಕೊಡು. "

" ಪತಿತರು ಉದ್ಧಾರವಾಗುವುದಕ್ಕೆ ಮಾರ್ಗವೇ ಇಲ್ಲವೇ ? "

" ಇದೆ "

" ಹೇಗೆ ? "

" ನಾವು 'ಪತಿತರಲ್ಲ' ಎಂದು ತಿಳಿದುಕೊಳ್ಳುವುದು. "

" ಇನ್ನೇನು ? "

" ನೀನು ಕಲಾವಂತೆ, ಕಲೆಗೆ ಮೈಲಿ ಇಲ್ಲ. ಲೋಕದ ಪಾಪ ದೋಷಗಳು ಅದರ ಮುಂದೆ ಸುಟ್ಟು ಹೋಗುತ್ತವೆ. "

" ನಿಮ್ಮ ಕಣ್ಣಿಗಾದರೂ ನಾನು ಪರಿಶುದ್ಧಳೇ ? "

" ನನ್ನ ಕಣ್ಣಿಗೆ ನೀನು ಮಹಾಸತಿ—ನನ್ನ ಗುರು " ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಹೋದ. ತನಗಾದ ಆನಂದವನ್ನು ವ್ಯಕ್ತಪಡಿಸಲಾರದೆ ನೀಲಾ ಅಲ್ಲೇ ಕುಸಿದುಬಿದ್ದಳು.

## ೧೦

ಪರೀಕ್ಷೆಯ ಗಡಿಬಿಡಿ ರಾಜನೊಬ್ಬನನ್ನು ಬಿಟ್ಟು ಯೂನಿಯನ್ನಿನ ಎಲ್ಲ ಗೆಳೆಯರನ್ನೂ ಆವರಿಸಿತ್ತು. ಅವರು ಯೂನಿಯನ್ ಕಡೆ ತಲೆಯಿಡುತ್ತಿರಲಿಲ್ಲ. ಯಾವಾಗಲಾದರೂ ಒಂದೊಂದು ದಿವಸ ಅಚ್ಯುತ ಬಂದು ಸ್ವಲ್ಪ ಹೊತ್ತು ಇದ್ದು ಹೋಗುತ್ತಿದ್ದ. ಶಾಲೆಯ ಪುಸ್ತಕಗಳನ್ನು ತಿರುವಿಹಾಕಿದ ಹಾಗೆ ಮಾಡಿ ರಾಜಾ ಮತ್ತೆ ಷೇಕ್ಸ್‌ಪಿಯರ್ ನಾಟಕಗಳನ್ನು ಹಿಡಿಯುತ್ತಿದ್ದ. ಕುಂಟುತ್ತ ನಡೆದಿದ್ದ " ಹ್ಯಾಂಲೆಟ್ " ನಾಟಕದ

ಅನುವಾದ ಮುಗಿದಿತ್ತು. ಅದನ್ನು ತಿದ್ದಿ, ರೂಪಗೊಳಿಸುವ ಪ್ರಯತ್ನ ಸಾಗಿತ್ತು.

ರಾಜನ ಸಂಗೀತ ಪಾಠ ಅವಿಚ್ಛಿನ್ನವಾಗಿ ಸಾಗಿತ್ತು. ಶಿಷ್ಯನ ಗ್ರಹಣ ಶಕ್ತಿಯನ್ನು ಕಂಡು ಗುರುಗಳು ಬೆರಗಾಗಿ ಹೋಗಿದ್ದರು. ಸತತ ಅಭ್ಯಾಸ ದಿಂದ ಪಲುಕುಗಳು, ನೆರವಲುಗಳು ಲೀಲಾಜಾಲವಾಗಿ ನುಡಿಯುತ್ತಿದ್ದವು. ಹಗಲೂ ರಾತ್ರಿ ನಾಟಕಕ್ಕೆ ಉಪಯೋಗಿಸುವ ಸಂಗೀತದ ಬಗ್ಗೆ ರಾಜನ ಚಿತ್ತ ಲೀನವಾಗಿ ಬಿಟ್ಟಿತು. ಒಂದೊಂದು ಹಾಡನ್ನೂ ಬೇರೆ ಬೇರೆ ರಾಗಗಳಲ್ಲಿ, ರೀತಿಗಳಲ್ಲಿ ಹಾಡಿ ಹಾಡಿ ನಿರ್ಣಯಿಸುತ್ತಿದ್ದನು. ಅವನ ಸ್ಫೂರ್ತಿಯ ವೇಗವನ್ನು ತಡೆಯಲಾರದೆ ಮೃದಂಗದ ರಾಮಯ್ಯನಂತಹ ವಾದ್ಯವಾದನ ಪಟುವೂ ಸುಮ್ಮನಾಗಿಬಿಡುತ್ತಿದ್ದನು.

ಪರೀಕ್ಷೆ ಬರುತ್ತದೆ ಬರುತ್ತದೆ ಎಂದು ನಿರೀಕ್ಷಿಸುತ್ತಿದ್ದಂತೆ ಬಂದದ್ದೂ ಆಯಿತು, ಮುಗಿದದ್ದೂ ಆಯಿತು. ರಾಜನೂ ಪರೀಕ್ಷೆಗೆ ಕುಳಿತ ಶಾಸ್ತ್ರ ಮಾಡಿದ್ದ. ದೇವದಾಸನಿಗಂತೂ ರ್‍ಯಾಂಕ್ ಕಟ್ಟಿಟ್ಟ ಬುತ್ತಿಯಾಗಿತ್ತು. ಹಕ್ಕಿಗಳು ಮತ್ತೆ ಒಂದೆಡೆ ಸೇರುವಂತಾಯಿತು. ಶಾಕುಂತಲ ನಾಟಕದ ಅಭ್ಯಾಸ ಒಳ್ಳೆಯ ಹುರುಪಿನಿಂದ ಮುಂದುವರಿಯಿತು.

ಶಾಕುಂತಲ ಜತೆಗೆ ರಾಮವರ್ಮನನ್ನೂ ಆಡಿಬಿಡೋಣ ಎಂದು ದೇವದಾಸನ ಬಲವಂತ. ಒಂದೇ ಸಾಕು ಸದ್ಯಕ್ಕೆ, ಎರಡೂ ಕಷ್ಟವಾದ ನಾಟಕಗಳು, ಯದ್ವಾತದ್ವವಾದೀತು ಎಂದು ತಿರುಮಲನ ವಾದ. ರಾಮ ವರ್ಮದಲ್ಲಿ ದೇವದಾಸನಿಗೆ ಸೊಗಸಾದ ಪಾತ್ರವಿತ್ತು. ಅವನು ಅದಕ್ಕೆಲ್ಲಿ ತುಂಡುಬೀಳುವುದೋ ಎಂದು ವ್ಯಸನಾಕ್ರಾಂತನಾದನು. ಮೊದಲು ಶಾಕುಂತಲ ಆಗಲಿ, ಬುಳ್ಳಪ್ಪ ಇನ್ನೊಂದು ದಿವಸ ನಾಟಕಶಾಲೆ ಕೊಟ್ಟರೆ ರಾಮವರ್ಮ ಆಡೋಣ ಎಂದು ರಾಜಾ ಸಮಾಧಾನ ಹೇಳಿದ.

ಬುಳ್ಳಪ್ಪ ಕೊಟ್ಟಿದ್ದ ಮಾತನ್ನು ಹಿಂತೆಗೆದುಕೊಳ್ಳಲಿಲ್ಲ. ತಿಂಗಳ ಮೊದಲನೆಯ ಭಾನುವಾರ ಸಂಜೆ ಶಾಕುಂತಲ ಆಡುವುದೆಂದು ನಿಶ್ಚಯ ವಾಯಿತು. ಅಧ್ಯಕ್ಷಸ್ಥಾನಕ್ಕೆ ತಮ್ಮ ಕಾಲೇಜಿನ ಪ್ರಿನ್ಸಿಪಾಲರನ್ನೇ ಪ್ರಾರ್ಥಿಸಿಕೊಳ್ಳಬೇಕೆಂದು . ಗೊತ್ತಾಯಿತು. ಪ್ರಕಟನೆ, ಪ್ರಸಾರ ಕಾರ್ಯವೆಲ್ಲಾ ಒಳ್ಳೆಯ ಹುರುಪಿನಿಂದ ಸಾಗಿತು. ಊರಿನ ಜನವೂ

ನಾಟಕವನ್ನು ಉತ್ಸಾಹದಿಂದ ಎದುರು ನೋಡುತ್ತಿತ್ತು. ಕಾಲೇಜಿನ ವಿದ್ಯಾರ್ಥಿಗಳ ಸಡಗರಕ್ಕಂತೂ ಮೇರೆಯೇ ಇರಲಿಲ್ಲ. ನೂರಾರು ಆಹ್ವಾನ ಪತ್ರಗಳು ಊರಿನ ಹಿರಿಯರಿಗೆ, ನಟರ ಗೆಳೆಯರು, ಬಂಧುವರ್ಗದವರಿಗೆ ಹೋಗಿತ್ತು. ತನ್ನವರಾಗಿ ನಾಟಕ ನೋಡುವುದಕ್ಕೆ ಯಾರೂ ಬರುವ ಹಾಗಿಲ್ಲವಲ್ಲಾ ಎಂದು ರಾಜನಿಗೆ ದುಃಖ. ಜೀವಕ್ಕ, ಜೀವತೆಗೆದರೂ ನಾಟಕಕ್ಕೆ ಹೋಗುತ್ತಿರಲಿಲ್ಲ. ಸೀತಮ್ಮ ತುಂಬಿದ ಬಸುರಿ. ಗಂಟೆಗಂಟೆಗಳು ಕೂಡುವುದಕ್ಕೆ ಅವಳಿಗೆ ಸಾಧ್ಯವಾಗುತ್ತಿರಲಿಲ್ಲ. ರಾಜನ ತಂದೆ ನಾಟಕ ಸಿನೀಮಾಗಳ ಆಜನ್ಮ ಶತ್ರುಗಳು. ಜತೆಗೆ "ನಮ್ಮ ಹುಡುಗನ ನಾಟಕ" ಎಂಬ ತಾತ್ಸಾರ ಬೇರೆ.

"ನೀಲಾ" ಅವಳನ್ನು ಬರಹೇಳಬೇಕು. ಅವಳು ಕೊಟ್ಟ ಪ್ರೋತ್ಸಾಹವೇ ಇಷ್ಟು ದೂರ ನನ್ನನ್ನು ತಂದಿದೆ. ಅವಳು ಬರದಿದ್ದರೆ ನಾಟಕಕ್ಕೆ ಕಳೆಯೇ ಬರುವುದಿಲ್ಲ ಎಂದು ರಾಜ ಯೋಚಿಸಿದನು. ಯಾರ ಕೈಯಲ್ಲಾದರೂ ಅವಳಿಗೊಂದು ಆಹ್ವಾನ ಪತ್ರಿಕೆಯನ್ನು ಕಳುಹಿಸಲು ಮನಸ್ಸಾಗಲಿಲ್ಲ. ತಾನೇ ಹೋದರೆ—ಹೋಗಿ ಬಹಳ ದಿವಸವಾಯಿತು—ಅಲ್ಲಿಂದ ಬೇಗ ಬಿಡುಗಡೆ ಹೊಂದುವುದು ಕಷ್ಟವಾಗುತ್ತದೆ; ಎಂದು ಯೋಚಿಸಿ "ಹೇಗಾದರೂ ಆಗಲಿ, ಹೋಗಿ ಹೇಳಿಯೇ ಬರಬೇಕು" ಎಂದು ನಿರ್ಧರಿಸಿ ನೀಲನ ಮನೆಯ ಕಡೆ ಹೊರಟುಬಿಟ್ಟ.

"ಇನ್ನೂ ನನ್ನ ಜ್ಞಾಪಕ ಉಳಿದಿದೆಯೇ?" ಎಂದು ನೀಲಾ ನಗು ನಗುತ್ತಾ ಸ್ವಾಗತಿಸಿದಾಗ ರಾಜನಿಗೆ ತಲೆ ತಗ್ಗಿಸುವಂತಾಯಿತು.

"ಕೆಲಸದ ಗಲಾಟೆ. ನಾಟಕವೆಂದರೆ ಭಾರೀಸಂಸಾರ. ಬರುವುದಕ್ಕೆ ಪುರಸತ್ತು ಆಗಲಿಲ್ಲ"

"ಮನಸ್ಸಿದ್ದರೆ ಮಾರ್ಗವಿದ್ದೇ ಇರುತ್ತದೆ."

"ಹಾಗಾದರೆ ಮನಸ್ಸಿಲ್ಲದೆ ಬರಲಿಲ್ಲವೆಂದು ತಿಳಿದುಕೊಂಡೆಯಾ."

"ಇನ್ನೇನೆಂದು ತಿಳಿದುಕೊಳ್ಳಲಿ."

"ನಿಜವಾದ ಕಾರಣ ಹೇಳಿದೆನಲ್ಲಾ."

"ಮೂರು ನಾಲ್ಕು ಸಲ ಹೇಳಿ ಕಳಿಸೋಣ ಎಂದುಕೊಂಡೆ. ನಿಮಗೇತಕ್ಕೆ ತೊಂದರೆ ಎಂದು ಸುಮ್ಮನಾದೆ."

" ನೀನು ಬಲುಬೇಗ ತಪ್ಪು ಅರ್ಥಮಾಡಿಕೊಳ್ಳುತ್ತೀ, ನೀಲಾ. "

" ಎರಡು ಮೂರು ದಿವಸಕ್ಕೊಮ್ಮೆಯಾದರೂ ಇತ್ತಕಡೆ ಬಂದು ಮುಖತೋರಿಸಿ. "

" ಎರಡು ಮೂರು ದಿವಸಕ್ಕೊಮ್ಮೆಯೇ—ಹಾಗಾದರೆ ನಿತ್ಯ ಬರಬೇಡ ವೇನು ? "

" ನನಗೆ ಅಷ್ಟು ಭಾಗ್ಯವಿದೆಯೇ ? "

" ಇದೆ ನೀಲಾ–ಈಗ ದೊಡ್ಡ ಭಾಗ್ಯವಿದೆ. ನನ್ನ ನಾಟಕ ನೋಡುವ ಭಾಗ್ಯ—ಭಾನುವಾರ ನಮ್ಮ ನಾಟಕ. "

" ಪ್ರಕಟನೆ ನೋಡಿದೆ. "

" ಬರುವೆಯಲ್ಲವೇ ? "

" ಬರಬೇಕೇ ? "

" ನಿನ್ನಿಷ್ಟ. "

" ನನ್ನಿಷ್ಟ ನೋಡಿ " ಎಂದು ಡ್ರಾಯರ್ ಎಳೆದು ಮೂರು ರೂಪಾಯಿನ ಟಿಕೇಟ್‌ಗಳನ್ನು ತೋರಿಸಿದಳು.

" ನೀನು ಟಿಕೆಟ್ ಏತಕ್ಕೆ ಕೊಂಡೆ. "

" ನನ್ನ ಕಲಾವಿದನಿಗೆ ನನ್ನ ಅಲ್ಪ ಕಾಣಿಕೆ. "

" ತುಂಬ ಅನ್ಯಾಯ ಮಾಡಿದೆ ನೀಲಾ. "

" ಅದೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ನಾಟಕ ಚನ್ನಾಗಲಿ. ನಿಮಗೆ ಒಳ್ಳೆಯ ಹೆಸರು ಬರಲಿ. ನನಗೆ ಅಷ್ಟೇ ಬೇಕಾದದ್ದು. "

ಅವಳ ಔದಾರ್ಯ, ತಿಳಿಮನಸ್ಸು ರಾಜನನ್ನು ಅರೆಮೂಕನನ್ನಾಗಿ ಮಾಡಿದವು.

" ನಾಟಕ ಮುಗಿದ ಮೇಲೇ ನಿನ್ನ ಕಾಣುವುದು ನೀಲಾ. "

" ಹಾಗೇ ಆಗಲಿ. ಆ ವೇಳಾದರೂ ಮರೆಯದಿದ್ದರೆ ಸಾಕು. "

ಹೊಸ ಚಿಂತೆಯೊಂದನ್ನು ಹೊತ್ತು ರಾಜ ಅಲ್ಲಿಂದ ಹೊರಡಬೇಕಾಯಿತು. " ಇತ್ತ ಸೀತಾ, ಅತ್ತ ನೀಲಾ "—ಇಬ್ಬರನ್ನೂ ತನ್ನನ್ನು ಪ್ರೀತಿಸುವವರೇ. ತಾನೂ ಇಬ್ಬರನ್ನೂ ಪ್ರೀತಿಸುತ್ತೇನೆ. ಆದರೆ ಮೂವ್ವರ ಜೀವ ಒಂದಾಗುವುದು ಸಾಧ್ಯವೇ ? ಈ ಮಧುರಸ್ವಪ್ನ ಒಂದಲ್ಲ ಒಂದು ದಿವಸ ಒಡೆದು

ಯಾರಿಗಾದರೂ ನೋವಾದರೆ ಏನು ಮಾಡುವುದು. ಇದರ ಮುಕ್ತಾಯ ಹೇಗಾಗುತ್ತದೆ?

ಸೀತಮ್ಮನೂ ದುಃಖಿ. ಗಂಡನ ವೈಭವವನ್ನು ನೋಡುವುದಕ್ಕಾಗುವುದಿಲ್ಲವಲ್ಲಾ ಎಂಬ ಕೊರಗು ಅವಳ ಚಿತ್ತವನ್ನು ಹಿಂಡಿಬಿಟ್ಟಿತ್ತು. ಆದರೆ ಅದಕ್ಕೆ ವಿಘ್ನವನ್ನು ತಂದ ತನ್ನ ಸ್ಥಿತಿಯನ್ನು ಅವಳು ನಿಂದಿಸುತ್ತಿರಲಿಲ್ಲ. ತನ್ನ ಗರ್ಭದಲ್ಲಿ ಮೂಡಿದ್ದ ಪತಿಯ ಅನಂತಪ್ರೇಮದ ಸಂಕೇತವನ್ನು ನೆನೆದು ಅವಳ ಹೃದಯ ಹಿಗ್ಗಿಹೋಗುತ್ತಿತ್ತು.

ನಾಟಕದ ಪ್ರತಿಯೊಂದು ಭಾಗವನ್ನೂ ರಾಜ ವರ್ಣಿಸಿ ಸೀತಮ್ಮನಿಗೆ ಹೇಳಿದ. "ಯೋಚನೆ ಮಾಡಬೇಡ ಚಿನ್ನಾ. ನೀನು ಮೈಕಳೆದು ಏಳು. ಆ ವೇಳೆ ನಿನಗೋಸ್ಕರವೇ ಇನ್ನೊಂದು ನಾಟಕ ಹಾಕಿಸಿ ತೋರಿಸುತ್ತೇನೆ. ಈಗ ಇಲ್ಲದ ಸಲ್ಲದ ವ್ಯಸನ ಮನಸ್ಸಿಗೆ ಹಚ್ಚಿಕೊಳ್ಳಬೇಡ" ಎಂದು ಸಮಾಧಾನ ಹೇಳಿದ.

ನಾಟಕಕ್ಕೆ ಶ್ರೀನಿವಾಸಯ್ಯಂಗಾರ್ಯರನ್ನು ಕರೆಯುವುದೇ ಬಿಡುವುದೇ ಎನ್ನುವ ವಿಷಯದಲ್ಲಿ ದೊಡ್ಡ ಚರ್ಚೆ ಯೂನಿಯನ್ನಿನ ಗೆಳೆಯರಲ್ಲಿ ಹುಟ್ಟಿತ್ತು.

"ಮಹಾಕೋಂಗಿ ಮನುಷ್ಯ. ಸಿಕ್ಕಿದಹಾಗೆ ಬಯ್ಯುತ್ತಾನೆ. ಕರೆದು ಔತನಕೊಟ್ಟು ಅವನ ಕೈಯಲ್ಲಿ ಬಯ್ಸಿಕೊಳ್ಳುವುದೇಕೆ" ಎಂದ ಅಚ್ಯುತ. ಅವನಿಗೆ ದೇವದಾಸನೂ ಬೆಂಬಲವಿತ್ತ. ತಿರುಮಲ ಮಾತ್ರ ಖಂಡಿತ ಕರೆದೇ ಕರೆಯಬೇಕೆಂದು ಹಟತೊಟ್ಟಿದ್ದ.

"ರಾಜ ಬರಲಿ, ಅವನು ಹೇಗೆ ಹೇಳಿದರೆ ಹಾಗೆ ಮಾಡೋಣ" ಎಂದು ನಿರ್ಧರಿಸಿದರು.

ರಾಜ ಬಂದವನೇ ತನ್ನ ನಿರ್ಣಯವನ್ನು ತಿರುಮಲನ ಕಡೆಗೆ ಕೊಟ್ಟುಬಿಟ್ಟ.

"ಏಳಿ. ಎಲ್ಲಾರೂ ಹೋಗಿ ಅವರಿಗೆ ಹೇಳಿ ಬರೋಣ."

"ನಾನೊಲ್ಲೆನಪ್ಪಾ. ಪಾಠಕ್ಕೆ ಬೇರೆ ಅವರ ಹತ್ತಿರ ಚಕ್ಕರ್ ಹೊಡೆದಿದ್ದೀನಿ" ಎಂದ ಅಚ್ಯುತ. "ಏಳೋ ಇರಲಿ, ದೊಡ್ಡವರು ಒಂದು ಮಾತು ಅಂದರೂ ಆಶೀರ್ವಾದ ಮಾಡಿದ ಹಾಗಾಗತ್ತೆ" ಎಂದು ಎಲ್ಲರನ್ನೂ ಎಬ್ಬಿಸಿಕೊಂಡು ಗುರುಗಳ ಮನೆಗೆ ಹೋದ.

ಅಯ್ಯಂಗಾರ್ಯರು ಎಲಡಿಕೆ ಡಬ್ಬಿಯನ್ನು ಮುಂದಿಟ್ಟುಕೊಂಡು ಕುಳಿತಿದ್ದರು. ಗೆಳೆಯರ ನಿಯೋಗಗೋಷ್ಠಿ ಬಂದುದನ್ನು ಕಂಡು ಏನೋ ಮಹತ್ಕಾರ್ಯವಿದೆಯೆಂದು ಭಾವಿಸಿದರು. ತಮ್ಮ ಸ್ವಾಭಾವಿಕ ಕೊಂಕಿನಿಂದ "ದಯಮಾಡಿಸಬೇಕು. ಇವತ್ತು ನಮ್ಮ ಮನೆ ಪಾವನವಾಯಿತು. ಏನು ಎಲ್ಲಾರೂ ಬರೋಣವಾಯಿತಲ್ಲಾ ಸಮಾಚಾರ—ಓಹೋ! ನಮ್ಮ ಅಚ್ಯುತ ರಾಯರೂ ಬಂದಿದ್ದಾರೆ. ಸಂತೋಷ" ಎಂದರು.

"ತಾವು..........." ತಿರುಮಲನಿಗೆ ಮುಂದೆ ಮಾತು ಹೊರಡಲಿಲ್ಲ.

"ಹೇಳು, ಏಕೆ ಭಯ."

"ತಾವು — ಗುರುಗಳೇ, ಭಾನುವಾರ ನಮ್ಮ ನಾಟಕಕ್ಕೆ ಬರಬೇಕು. ಕರೆಯುವುದಕ್ಕೆ ನಾವೆಲ್ಲಾ ಬಂದಿದ್ದೇವೆ."

"ಒಬ್ಬನ್ನ ಕರೆಯೋದಕ್ಕೆ ಇಷ್ಟು ಜನ ಬರಬೇಕೇ—ನಾನು ನಾಟಕ ಪಾಟಕಕ್ಕೆ ಬರೋದಿಲ್ಲವಲ್ಲಾ."

"ಅದು ಗೊತ್ತು ಗುರುಗಳೇ. ನಿಮ್ಮ ಶಿಷ್ಯರಿಗೋಸ್ಕರ ನೀವು ಬರಲೇಬೇಕು."

ಗುರುಗಳು ತಲೆಕೆರೆದುಕೊಳ್ಳುವುದಕ್ಕಾರಂಭಿಸಿದರು.

"ತಾವು ಬರದಿದ್ದರೆ ನಮ್ಮ ಉತ್ಸಾಹ ಭಂಗವಾಗುತ್ತದೆ. ಗುರುಗಳೇ."

ರಾಜನ ದೈನ್ಯ ಗುರುಗಳ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿತು.

"ಆಗಲಯ್ಯಾ ಬಂದು ಸ್ವಲ್ಪ ಹೊತ್ತಿದ್ದು ಬರ್‍ತೀನೆ. ಆಗಬಹುದೋ?"

"ತಮ್ಮ ಇಷ್ಟ."

"ಆದರೆ ಒಂದು ಮಾತು, ಯಾರಾದರೂ ಅಪಶ್ರುತಿ-ಅಪಸ್ವರ ಕೂಗಿ ದರೋ ತಲೆ ಒಡೆದುಹಾಕಿ ಬಿಡುತ್ತೇನೆ."

"ಆಗಲಿ-ಗುರುಗಳೇ" ಎಂದು ನಕ್ಕರು. ಕೊನೆಗೂ ಸಿಂಹವನ್ನು ಬಲಿಗೆ ಹಾಕಿದೆನಲ್ಲಾ ಎಂದು ಗೆಳೆಯರು ಸಂತೋಷಿಸಿದರು. ಅಚ್ಯುತನ ಮುಖ ನೋಡಿ ರಾಜ "ಗುರುಗಳ ಬಾಯಿ ಒರಟು ಅಚ್ಯುತ, ಆದರೆ ಮನಸ್ಸು ಬೆಣ್ಣೆಯಷ್ಟು ಮೃದು. ನೋಡು, ಭಾನುವಾರ ಎಲ್ಲರಿಗಿಂತ ಮುಂಚೆ ಬಂದು ಕುಳಿತಿರುತ್ತಾರೆ" ಎಂದು ಹೇಳಿದ.

೧೧

ನಾಟಕ ಚಪ್ಪರ ಮದುವೆಯ ಮನೆಯಂತೆ ಅಲಂಕೃತವಾಗಿತ್ತು. ಬಾಳೆಯಕಂದುಗಳು, ಹಸರುವಾಣಿ, ಜತೆಗೆ ಸೊಗಸಾದ ನಾಗಸ್ವರ ಹಬ್ಬದ ವಾತಾವರಣವನ್ನು ಸೃಷ್ಟಿಸಿದ್ದವು. ಬುಳ್ಳಪ್ಪ ವಿಶೇಷ ಉತ್ಸಾಹದಿಂದ ಮೇಲು ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ. ಸ್ವಾಗತದ ಕೆಲಸ ದೇವದಾಸನ ಮೇಲೆ ಬಿದ್ದಿತು. ಅವನು ಜತೆಗಿರಲೆಂದು ಮೂರಂಗುಲದ ಜರೀರುಮಾಲು, ಕರಿಸಿಲುಮಂಗಿ ಹಾಕಿಸಿ ರುದ್ರಪ್ಪನನ್ನೂ ಎಳೆದುಕೊಂಡು ಬಂದಿದ್ದ. ಅತಿಥಿಗಳು ನಾಟಕಶಾಲೆಯನ್ನು ತುಂಬುತ್ತ ಬಂದರು. ಜನ ಕಿಕ್ಕಿರಿದು ತುಂಬಿತ್ತು. ಅಧ್ಯಕ್ಷರಾದ ಪ್ರಿ. ಬ್ರೌನ್ ಸಾಹೇಬರು ೬-೩೦ ಗಂಟೆಗೆ ಸರಿಯಾಗಿ ಕಾರಿನಲ್ಲಿ ಇಳಿದರು.

ಒಳಗೆ ಭೂಮಿಕೆ ಧರಿಸಿ ಸಿದ್ಧನಾಗಿದ್ದ ರಾಜ, ಫರದೆಯ ಕಿಂಡಿಯಿಂದ ಪ್ರೇಕ್ಷಕ ವರ್ಗವನ್ನು ನೋಡಿದ. ಎಲ್ಲರೂ ಬಂದಿದ್ದಾರೆ. ಮಹಿಳೆಯರ ವಿಭಾಗದಲ್ಲಿ ನೀಲಾ ಕುಳಿತಿದ್ದಳು. ಆಹ್ವಾನಿತರು ಯಾರೂ ತಪ್ಪಿಸಿಕೊಂಡಿರ ಲಿಲ್ಲ. ಆದರೆ ಗುರುಗಳು ಎಲ್ಲಿಯೂ ಕಾಣಬರಲಿಲ್ಲ. ಮುಖ ನಿಸ್ತೇಜವಾಯಿತು. "ಬರುವರೋ, ಬರುವುದಿಲ್ಲವೋ. ಖಂಡಿತ ಬರುತ್ತೇನೆಂದು ಹೇಳಿದರಲ್ಲಾ" ಎಂದು ಚಿಂತಿಸುತ್ತ ಕುಳಿತ. ಅವನು ಕುಳಿತ ಸ್ವಲ್ಪ ಹೊತ್ತಿಗೆ ತಮ್ಮ ದಪ್ಪ ಅಂಕೋಲೆ ದೊಣ್ಣೆಯನ್ನೂರಿಕೊಂಡು ಶ್ರೀನಿವಾಸಯ್ಯಂಗಾರ್ಯರು ಒಳಗೆ ಬಂದಿದ್ದರು. ಗುರುಗಳ ಮುಖನೋಡಿ ರಾಜನ ಮುಖ ಅರಳಿತು. ಭೂಮಿಕೆಯ ಮೇಲಿದ್ದುದನ್ನು ಗಮನಿಸದೆ ಅವರ ಎರಡು ಪಾದಗಳನ್ನು ಮುಟ್ಟಿ ನಮಸ್ಕರಿಸಿದ. ಅಯ್ಯಂಗಾರ್ಯರ ಕಣ್ಣು ತೇವಗೊಂಡಿತ್ತು.

"ನೀನು ರಾಜನಪ್ಪಾ............"

"ಹೌದು ಗುರುಗಳೇ."

"ನಮ್ಮ ರಾಜ ಸರಿ. ಈಗ ದುಷ್ಯಂತ ರಾಜ ಪಾರ್ಟು ಭರ್ಜರಿಯಾಗಿ ಮಾಡಿ ಎಲ್ಲಾರ ಕೈಯಲ್ಲೂ ಜಯಜಯ ಅನಿಸಿಕೊಳ್ಳಬೇಕು ನೋಡು."

"ನಿಮ್ಮ ಆಶೀರ್ವಾದ ಗುರುಗಳೇ· ನೀವು ಬರುತ್ತೀರೋ ಇಲ್ಲವೋ ಎಂದು ಬಹಳ ಯೋಚನೆಯಾಗಿ ಬಿಟ್ಟಿತ್ತು."

" ಯೋಚನೆಯೇಕೆ ? ಬರುತ್ತೇನೆಂದು ಹೇಳಿರಲಿಲ್ಲವೇ. "

ಹೊತ್ತಾಯಿತೆಂದು ದೇವದಾಸ ಬಂದು ಎಚ್ಚರಕೊಟ್ಟ. ಗುರುಗಳನ್ನು ಕರೆದುಕೊಂಡು ಹೋಗಿ, ಅಧ್ಯಕ್ಷರ ಪಕ್ಕದಲ್ಲಿ ಅವರಿಗೆ ಹಾಕಿದ್ದ ಪೀಠದಲ್ಲಿ ಕುಳ್ಳಿರಿಸಿ ಬಂದ.

ನಾಟಕಾರಂಭದ ಘಂಟಾ ಸಂಕೇತವೂ ಆಯಿತು. ತೆರೆ ಮೇಲಕ್ಕೆ ಹೋಯಿತು. ನಟಿ, ಸೂತ್ರಧಾರರ ಪ್ರವೇಶವೂ ಮುಗಿಯಿತು.

ವನ ಪ್ರದೇಶ. ಜಿಂಕೆಯನ್ನು ಬೆನ್ನಟ್ಟಿ ದುಷ್ಯಂತ ರಾಜ ಪ್ರವೇಶಿಸುತ್ತಾನೆ. ರಾಜ "ಪಾರಿತು ಪಾರಿತು ಫಡವ್ಮೃಗಪೋತ" ಹಾಡಿಕೊಂಡು ಹರಿಣಿಯನ್ನು ಬೆನ್ನಟ್ಟಿ ಹರಿಣಿಯ ವೇಗದಲ್ಲಿ ಪ್ರವೇಶಿಸಲು ಸಭೆಯಲ್ಲಿ ವಿದ್ಯುತ್ಪ್ರಭೆ ಬೆಳಗಿದಂತಾಯಿತು. ಅವನು ಪ್ರವೇಶಿಸಿದ ವೈಖರಿಗೆ ಬೆರಗುಗೊಂಡು ಸಭಿಕರು ಬಹಳ ಹೊತ್ತು ಕರತಾಡನ ಮಾಡಿ ತಮ್ಮ ಸಂತೋಷವನ್ನು ವ್ಯಕ್ತಗೊಳಿಸಿದರು.

ನಾಟಕ ಮುಂದುವರಿಯಿತು. ದುಷ್ಯಂತ ತಪಸ್ವಿ ಕನ್ಯೆಯರನ್ನು ನೋಡುತ್ತಾನೆ. ಅವರ ರೂಪಿಗೆ ಮರುಳಾಗುತ್ತಾನೆ. ಆ ಸಂದರ್ಭಕ್ಕುಚಿತವಾಗಿ ಭೈರವಿ ರಾಗದ ಕಂದ "ಓವೊ ತಪೋವನ ವಧುಗಳ ಲಾವಣ್ಯಂ, ರಾಣಿವಾಸಕರಿದೆನೆ ಪಡೆಯಲ್ಕೇವೇಳ್ದಪೆನುದ್ಯಾನಲತಾವಳಿ ವನಲತೆಗಳಿಂ ತಿರಸ್ಕೃತವಕ್ತೇ" "ಹಾಡಿದಾಗ ಸಭಿಕರು 'ಮತ್ತೊಮ್ಮೆ' ಎಂದು ಕೂಗುವುದು ಹಾಗಿರಲಿ, ಶ್ರೀನಿವಾಸಯ್ಯಂಗಾರ್ಯರೇ ಗಟ್ಟಿಯಾಗಿ "ಒನ್ಸ್ ಮೋರ್" ಎಂದು ಕೂಗಿದರು. ರಾಜ ಅದನ್ನೇ ಮತ್ತೆ ಹಾಡಿದ, ಅಲ್ಲಿಂದ ಯಾವ ಕಂದವನ್ನೂ ಅವನು ಒಂದು ಸಲಕ್ಕೆ ಹಾಡಿ ಮುಗಿಸುವುದಕ್ಕೆ ಜನ ಅವಕಾಶಕೊಡುತ್ತಿರಲಿಲ್ಲ. ನಟರು, ನಾಟಕ, ಪ್ರೇಕ್ಷಕರು ಮೂವರೂ ಒಂದಾಗಿದ್ದಂತೆ ಕಂಡು ಬರುತಿತ್ತು. ಒಂದೊಂದು ಹಾಡಿಗೂ, ಪ್ರವೇಶಕ್ಕೂ, ಮಾತಿಗೂ ಚಪ್ಪಾಳೆಯ ಸುರಿಮಳೆಯಾಗುತಿತ್ತು.

ಕವಿಯ ಮನೋಗತವನ್ನು ಗ್ರಹಿಸಿ ಅರ್ಥೋಚಿತವಾಗಿ ಕಂದಪದ್ಯಗಳನ್ನು ವಿಭಾಗಮಾಡಿ ವಿಸ್ತರಿಸಿ ಹಾಡುತ್ತಿದ್ದ ರೀತಿ ವಿದ್ವಜ್ಜನಗಳ ಮನಸ್ಸನ್ನು ಬಹಳವಾಗಿ ಹಿಡಿಯಿತು.

ರಾಜನ ಕಣ್ಣು ಒಂದೆರಡು ಸಲ ಸ್ತ್ರೀಯರ ವಿಭಾಗದ ಕಡೆಗೆ ಹರಿಯಿತು. ತದೇಕಚಿತ್ತಳಾಗಿ ನಾಟಕವನ್ನವಲೋಕಿಸುತ್ತ ಕುಳಿತಿದ್ದ ಪ್ರೇಯಸಿ ನೀಲನನ್ನು ನೋಡಿದನು. ಶಕುಂತಲೆಯನ್ನು ವರ್ಣಿಸುತ್ತಾ ದುಷ್ಯಂತ :

"ಈ ಮಧುರಾಕೃತಿ ಮಾನುಷ
ಕಾಮಿನಿಯರ ಬಸಿರೊಳೆಂತು ಪುಟ್ಟುಗುಮಿಳೆಯೊಳ್ ॥
ವ್ಯೋಮದೊಳುದಯಿಪ ಮಿಂಚೀ
ಭೂಮಿತಲ ದತ್ತಣಿಂದದೇಂ ಪುಟ್ಟುಗುಮೋ? ॥"

ಕಂದವನ್ನು ಕೇದಾರಗೌಳದಲ್ಲಿ ಹಾಡಿ ಮುಕ್ತಾಯ ಕೊಟ್ಟಾಗ ರಾಜ, ನೀಲರ ಕಣ್ಣುಗಳು ಕೂಡಿದವು. ರಾಜನ ವರ್ಣನೆಯನ್ನು ಕೇಳಿ ನಾಟಕದಲ್ಲಿ ಶಕುಂತಲೆಯೂ ಲಜ್ಜೆಯಿಂದ ತಲೆ ತಗ್ಗಿಸುತ್ತಾಳೆ; ಆ ವರ್ಣನೆಯನ್ನು ಕೇಳಿ ನಾಟಕದ ಹೊರಗಿದ್ದ ನೀಲಾ ಲಜ್ಜೆಯಿಂದ ತಲೆತಗ್ಗಿಸಿದಳು. ಮಹಾಕವಿ ಕಾಳಿದಾಸನ ಪರಿಣಿತ ಶೃಂಗಾರದ ಒಂದೊಂದು ಸವಿನುಡಿಯನ್ನೂ ರಾಜ ತಾನೇ ತನ್ನ ಪ್ರೇಯಸಿಗೆ ಹೇಳಿದಂತೆ ನುಡಿಯುತ್ತಿದ್ದನು.

ದ್ವಿತೀಯಾಂಕದಲ್ಲಿ ಕುಶಲ ಕಲಾವಿದನ ಶಕ್ತಿಯನ್ನು ಪರೀಕ್ಷಿಸುವ ಒಂದು ಸನ್ನಿವೇಶ. ವಿದೂಷಕ ಮಿತ್ರನಾದ ಮಾಢವ್ಯನೊಂದಿಗೆ ಶಕುಂತಲೆ ತನ್ನಲ್ಲಿ ಅನುರಕ್ತಿಯನ್ನು ತೋರಿಸಿದ ಬಗೆಯನ್ನು ದುಷ್ಯಂತ ವಿವರಿಸಬೇಕಾಗಿದೆ. ಕವಿಗುರು ಕಾಳಿದಾಸನ ಮೂಲಕ್ಕೆ ಸರಿದೊರೆಯಾಗಿ ನಿಲ್ಲುವಂತಹ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳವರ ಮನೋಹರ ಕಾವ್ಯಕೌಶಲ್ಯ. ಆದರೆ ರಾಜನಿಗೆ ಸ್ಮೃತಿ ತಪ್ಪಿ ಹೋಗಿತ್ತು. ನಾಟಕದ ರಸಪ್ರವಾಹದಲ್ಲಿ ತನ್ನ ಚೇತನಗಳನ್ನು ಅವನು ತೇಲಿಬಿಟ್ಟಂತೆ ಇತ್ತು. ಕವಿಗುರುವಿನ ಒಂದೊಂದು ಮಾತೂ ರಸಭರಿತವಾಗಿ, ಅನುಭವವೇದ್ಯವಾಗಿ ಅವನ ಬಾಯಿಂದ ಹೊರಬೀಳುತ್ತಿತ್ತು.

"ನಿನ್ನನ್ನು ನೋಡಿದ ಮಾತ್ರದಿಂದಲೇ ಆಕೆ ನಿನ್ನ ತೊಡೆಯನ್ನೇರುವಳೇ" ಎಂದು ಮಾಢವ್ಯ ದುಷ್ಯಂತನನ್ನು ಪರಿಹಾಸ್ಯ ಮಾಡುತ್ತಾನೆ. ಅದಕ್ಕೆ ರಸಿಕ ಶಿರೋಮಣಿಯಾದ ದುಷ್ಯಂತ

"ನಡೆಯುತ್ತೊಡನೆ ಕುಶಾಂಕುರ
ಮುಡಿಯೊಳ್ ತಾಗಿದುದೆನುತ್ತೆ ನಿಂದಳ್ ಮೇಣ್ ಪೂ ॥
ಗಿಡದೊಳ್ ಸಿಲ್ಕಿದೊಡಂ ಸಾ
ರುಡೆಯಂ ಬಿಡಿಸುತ್ತೆ ತಿರುಗಿ ನೋಡಿದಳೆನ್ನಂ"

ಎಂದು ಉತ್ತರಿಸುತ್ತಾನೆ. ರಾಜ ಆ ಕಂದವನ್ನು ಶಂಕರಾಭರಣ ರಾಗದ ಸಂಪೂರ್ಣ ಕಳೆಗಳೊಂದಿಗೆ ಹಾಡಿದಾಗ ಅವನ ಕಲಾಪರಿಣತಮತಿ ಪ್ರೇಕ್ಷಕರಿಗೆ ಅರ್ಥವಾದಂತಾಯಿತು. "ಇದು ಜನ್ಮಾಂತರದ ಸಂಸ್ಕಾರ" ಎಂದು ಪಂಡಿತರೊಬ್ಬರು ನುಡಿದರು. ಶ್ರೀನಿವಾಸಯ್ಯಂಗಾರ್ಯರು ಕಣ್ಣು ಗಳಿಂದ ಧಾರಾಕಾರವಾಗಿ ಹರಿಯುತ್ತಿದ್ದ ಹರ್ಷಜಲವನ್ನು ನಿವಾರಿಸಿಕೊಳ್ಳು ತ್ತಿದ್ದರು. ಡಾ. ಬ್ರೌನ್ ಸಾಹೇಬರು "Magnificient" ಎಂದು ಘೋಷಿಸಿದರು.

ರಾಜನ ಪ್ರತಿಭೆಯ ಪ್ರವಾಹದೊಂದಿಗೆ ತೇಲುವುದು ಅಚ್ಯುತನಿಗೆ ಬಹಳ ಕಷ್ಟವಾಗಿತ್ತು. ಆದರೆ ನಾಲ್ಕನೆಯ ಅಂಕದಲ್ಲಿ ತಂದೆಯಿಂದ ಶಕುಂತಲೆ ಬೀಳ್ಕೊಳ್ಳುವ ಸನ್ನಿವೇಶದಲ್ಲಿ ಅಚ್ಯುತ ತನ್ನ ಶೋಕರಸಪ್ರದರ್ಶನ ದಿಂದ ಎಲ್ಲರ ಕಣ್ಣುಗಳಿಂದ ನೀರು ಕರಿಸಿದ. ಕಣ್ವರ ಪಾತ್ರವನ್ನಭಿನಯಿಸಿದ್ದ ದೇವದಾಸನ ಹಾಡಿಕೆ ಜನಗಳಿಗಷ್ಟು ಹಿಡಿಯದಿದ್ದರೂ ಅವನ ಗಾಂಭೀರ್ಯ, ಅಭಿನಯ ಕೌಶಲ್ಯಗಳನ್ನು ಕಂಡು ಜನ ಮೆಚ್ಚಿಕೊಂಡರು.

ನಾಟಕ ಎಡೆತಡೆಯಿಲ್ಲದೆ ಸಾಗಿತು. ಜನ ಆನಂದದಿಂದ ಕುಣಿದಾಡು ತ್ತಿದ್ದರು. ಕೊನೆಯ ದೃಶ್ಯಕ್ಕೆ ಸ್ವಲ್ಪ ಮುಂಚೆ ದೇವದಾಸ್ ವೇದಿಕೆಯ ಮೇಲೆ ಬಂದು ನಿಂತು ಪ್ರೇಕ್ಷಕರಿಗೂ, ಅಧ್ಯಕ್ಷರಿಗೂ ಸಂಘದ ವಂದನೆಗಳ ನ್ನರ್ಪಿಸಿ ಹಾರ ತುರಾಯಿಗಳನ್ನರ್ಪಿಸಿದ. ಅಧ್ಯಕ್ಷರು ವೇದಿಕೆಯ ಮೇಲೆ ನಿಂತು ನಾಲ್ಕು ಮಾತುಗಳನ್ನಾಡಿದರು:

"ನಾಟಕ ಬರೆದವನು ಲೋಕ ವಿಖ್ಯಾತನಾದ ಮಹಾಕವಿ. ಆಡಿ ದವರು ನಾಟ್ಯ ವಿಲಾಸಿಗಳಾದ ಕಿರಿಯರು. ರಂಗ ಪ್ರದರ್ಶನಕ್ಕೆ ಶಾಕುಂತಲ ಬಹಳ ಕಷ್ಟವಾದ ನಾಟಕವೆಂದು ತಮಗೆಲ್ಲಾ ತಿಳಿದೇ ಇದೆ. ಇದನ್ನು ಅಭಿನಯಿಸುತ್ತೇವೆಂದು ಸಂಘದ ಸದಸ್ಯರು ತಿಳಿಸಿ, ನನ್ನನ್ನು ಅಧ್ಯಕ್ಷಸ್ಥಾನಕ್ಕೆ ಕರೆದಾಗ ನಾನು ಅವರ ಮೇಲಣ ಪ್ರೇಮ

ದಿಂದ ಒಪ್ಪಿಕೊಂಡೆ. ಇಂದಿನ ನಟರೆಲ್ಲಾ ನನ್ನ ಶಿಷ್ಯರು. ಇಲ್ಲಿಗೆ ನನ್ನನ್ನು ಕರೆತಂದುದು ಅವರ ಮೇಲಣ ಪ್ರೇಮ, ಆದರೆ ಕೂರಿಸಿ, ಹೃದಯವನ್ನು ಸೆರೆಹಿಡಿದುದು ಅವರ ಕಲಾ ಪ್ರಾವೀಣ್ಯತೆ. ನನ್ನ ಶಿಷ್ಯರಲ್ಲಿ ಇಷ್ಟು ಉತ್ತಮ ಕಲಾವಿದರಿದ್ದಾರಲ್ಲಾ ಎಂದು ನನಗಾಗುವ ಹೆಮ್ಮೆ ಹೇಳತೀರದು. ಅದರಲ್ಲಿ ನಾಯಕ ಪಾತ್ರವನ್ನಭಿನಯಿಸಿದ ರಾಜನ ವಿಚಾರ ಏನು ಹೇಳಲಿ. ಅವನೊಬ್ಬ ಕಲಾಯೋಗಿ. ನಮಗೆ ಈ ಗೆಳೆಯರು ಕೊಟ್ಟಿರುವ ಶುಭ್ರ ಸಂತೋಷಕ್ಕೆ ಪ್ರತಿಯಾಗಿ ನಾವು ಏನೂ ಕೊಡಲಾರೆವು. ನನ್ನ ಮತ್ತು ತಮ್ಮೆಲ್ಲರ ಕೃತಜ್ಞತೆಯನ್ನರ್ಪಿಸಿ ಮುಗಿಸುತ್ತೇನೆ"

ಎಂದು ಸ್ವಸ್ಥಾನಕ್ಕೆ ಬಂದಕೂಡಲೆ ಬುಳ್ಳಪ್ಪ ವೇದಿಕೆಯನ್ನು ಹತ್ತಿ ರಾಜನಿಗೂ, ಇತರ ಪ್ರಧಾನ ನಟರಿಗೂ ಹೂಮಾಲೆಗಳನ್ನರ್ಪಿಸಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ. ಜನಕ್ಕೆ ಹಿಡಿಸಲಾರದಷ್ಟು ಸಂತೋಷ. ಯಾರ ಬಾಯಲ್ಲಿಯೂ ರಾಜನ ಮಾತೇ. ಪಂಡಿತ ಪಾಮರರಾದಿಯಾಗಿ ಎಲ್ಲರೂ ಕನ್ನಡ ರಂಗ ಭೂಮಿಯ ನವಯುಗವಾರಂಭವಾಯಿತೆಂದು ಭಾವಿಸಿಕೊಂಡರು. ಆ ಭಾವನೆಯು ಶ್ರೀನಿವಾಸಯ್ಯಂಗಾರ್ಯರಿಗೂ ಆಗಿತ್ತು. ನಾಟಕ ಮುಗಿಯುತ್ತಲು ಒಳಗೆ ಹೋಗಿ ಬಾಯಿತುಂಬ ನಟರನ್ನು ಹೊಗಳಿದರು. ಈಯೆಲ್ಲ ಹೊಗಳಿಕೆ, ಸ್ತುತಿ ರಾಜನನ್ನು ಸಂತೋಷಗೊಳಿಸಿತ್ತು. ಆದರೆ ಅದರ ಜತೆಯಲ್ಲಿ ನೆಳಲಿನಂತೆ ಒಂದು ದುಃಖವೂ ಆವರಿಸಿತ್ತು. ಅವನ ಸ್ಥಿತಿಯನ್ನು ಕಂಡು ಗೆಳೆಯರು "ಆಯಾಸವಾಗಿರಬಹುದು" ಎಂದುಕೊಂಡರು.

೧೨

ರಾಜನ ತಂದೆ ನಾಟಕಕ್ಕೆ ಹೋಗಿರಲಿಲ್ಲ, ಆದರೆ ಅವರ ಧಣಿ ಅಮಲ್ದಾರರು ಹೋಗಿದ್ದರು. ಆಫೀಸಿನಲ್ಲಿ ಆಚಾರ್ಯರನ್ನು ಕರೆಯಿಸಿ ಅವರ ಮಗನನ್ನು ಮನದಣಿಯ ಹೊಗಳಿದರು. ಆಚಾರ್ಯರು ಹೋದಲ್ಲಿ ಬಂದಲ್ಲಿ ಈ ಸ್ತುತಿ ಪಾಠ ಕೇಳಬಂದಿತ್ತು. "ಎಂತಹ ಕೆಲಸ ಮಾಡಿದೆ. ನಾಟಕಕ್ಕೆ ಹೋಗಿದ್ದರೆ ಚೆನ್ನಾಗಿತ್ತಲ್ಲಾ" ಎಂದುಕೊಂಡರು.

ಯೂನಿಯನ್ನಿಗೆ ನವಚೈತನ್ಯ ಬಂದು ಬಿಟ್ಟಿತು. ಬೇಕಾಬಿಟ್ಟಿಯಾಗಿ ಬರುತ್ತಿದ್ದವರು ನಿತ್ಯವೂ ಬರುವುದಕ್ಕಾರಂಭಿಸಿದರು. ಹೊಸಬರು ಸದಸ್ಯರಾಗಿ ಬರುವುದಕ್ಕೆ ಮೊದಲು ಮಾಡಿದರು. ಗೆಳೆಯರು ತಪ್ಪದೆ ಬಂದು ಸೇರುತ್ತಿದ್ದರು. 'ಶಾಕುಂತಲ' ಇನ್ನೂರು ರೂಪಾಯಿ ವರಮಾನ ತಂದಿತ್ತು, ಜತೆಗೆ ಪ್ರಿನ್ಸಿಪಾಲರು ನೂರು ರೂಪಾಯಿನ ಚೆಕ್ ಕಳುಹಿಸಿದ್ದರು. ಯೂನಿಯನ್ನಿನ ಗೆಳೆಯರಿಗೆ ವಿಶೇಷ ಹುರುಪು ಬಂದಿತ್ತು. ಕೈಯಲ್ಲಿ ಬೇಕಾದಷ್ಟು ಹಣವಿತ್ತು, ರಜ ಮುಗಿದು ಕಾಲೇಜ್ ಬಾಗಿಲು ತೆಗೆಯುವುದರೊಳಗಾಗಿ ಹುಬ್ಬಳ್ಳಿಯ ತನಕ ಪ್ರವಾಸ ಹೋಗಿ ಬರಬೇಕೆಂದು ನಿರ್ಧರಿಸಿದ್ದರು. 'ರಾಮವರ್ಮ' ನಾಟಕವನ್ನು ಇಲ್ಲಿ ಮೊದಲು ಆಡುವುದು ಬೇಡ, ಪ್ರವಾಸ ತೀರಿಸಿಕೊಂಡು ಬಂದ ಮೇಲೆ ಆಡೋಣ ಎಂದು ನಿಶ್ಚಯಿಸಿದರು. ರಾಜನೂ ತನ್ನ ಸಮ್ಮತಿಯನ್ನು ಸೂಚಿಸಿದ. ಪ್ರವಾಸದ ವ್ಯವಸ್ಥೆ ಆರಂಭವಾಯಿತು. ದೇವದಾಸ್ ಮತ್ತು ರುದ್ರಪ್ಪ ಮೊದಲು ಹೋಗಿ ದಾವಣಗೆರೆ, ಹಾವೇರಿ, ಹುಬ್ಬಳ್ಳಿ, ಧಾರವಾಡಗಳಲ್ಲಿ ನಾಟಕ ಶಾಲೆಗಳನ್ನೋ, ಟೌನ್‌ಹಾಲ್‌ಗಳನ್ನೋ ಗೊತ್ತುಮಾಡಿ, ಪ್ರಕಟನೆ, ಊಟ ವಸತಿಯ ವ್ಯವಸ್ಥೆ ಎಲ್ಲಾ ಮಾಡುವುದೆಂದು ಗೊತ್ತಾಯಿತು.

ಒಂದು ದಿನ ಯೂನಿಯನ್ನಿನಲ್ಲಿ ರಾಜನೊಬ್ಬನೇ ಕುಳಿತಿದ್ದ. ಗೆಳೆಯರೂ ಬರುವ ವೇಳೆಯಾಗಿರಲಿಲ್ಲ. ಬುಳ್ಳಪ್ಪನ ಸ್ವಾರಿ ಚಿತ್ತೈಸಿತು. ರಾಜನಿಗೆ ಸ್ವಲ್ಪ ಆಶ್ಚರ್ಯವೇ ಆಯಿತು.

"ಏನು ಇಷ್ಟುದೂರ ದಯಮಾಡಿಸಿದಿರಿ ಬುಳ್ಳಪ್ಪನವರೇ ?"

"ಹೀಗೇ ಹೋಗ್ತಾ ಇದ್ದೆ. ನಿಮ್ಮ ಕಂಪನಿ ಬೋರ್ಡು ಕಣ್ಣಿಗೆ ಬಿತ್ತು ಬಂದೆ."

ಬೋರ್ಡು ಇದ್ದದ್ದು ಇಂಗ್ಲಿಷಿನಲ್ಲಿ. ಅದನ್ನು ನೋಡಿ ಬುಳ್ಳಪ್ಪ ಬಂದಿಲ್ಲವೆಂದು ರಾಜ ತರ್ಕಿಸಿಕೊಂಡ.

"ಏನು ಸಮಾಚಾರ ?"

"ನಮ್ಮ ನಾಟಕಕ್ಕೆ ಬರೋದ್ನ ಬಿಟ್ಟೇಬಿಟ್ಟೀರಿ."

"ಪುರಸತ್ತಾಗಲಿಲ್ಲ ಬುಳ್ಳಪ್ಪನವರೇ, ನಾಟಕ, ಅದರ ಅಭ್ಯಾಸ, ಜತೆಗೆ ಪ್ರವಾಸದ ಏರ್ಪಾಡು..............."

“ಪ್ರವಾಸ...........ಎಲ್ಲಿಗೆ?”

“ಹುಬ್ಬಳ್ಳಿತನಕ ಹೋಗಿ ಬರೋಣ ಎಂದು ಗೆಳೆಯರು ನಿರ್ಧರಿಸಿದ್ದಾರೆ.”

“ಬಹಳ ಸಂತೋಷ ಸ್ವಾಮಿ.”

“ನಿಮ್ಮ ನಾಟಕಗಳು ಹೇಗೆ ನಡೆದಿವೆ”?”

“ನಡೆದಿವೆ. ನಮ್ಮದೇನು ಸ್ವಾಮಿ, ಹೇಳೀಕೇಳೀ ಜಾತ್ರೆ ಕಂಪೆನಿ.”

“ಜಾತ್ರೆ ಕಂಪೆನಿಗಳಿಂದಲೇ ನಮ್ಮ ರಂಗಭೂಮಿ ಇನ್ನೂ ಬದುಕಿರೋದು ಬುಳ್ಳಪ್ಪನವರೇ.”

“ನಿಮ್ಮ ನಾಟಕ ನೋಡಿದ ಮೇಲೆ ನಮ್ಮ ಬದುಕು ಎಂಥಾ ಬದುಕು ಸ್ವಾಮಿ.”

“ನೀವು ದೊಡ್ಡ ಮನಸ್ಸು ಮಾಡುವ ಹೊತ್ತಿಗಲ್ಲವೇ ನಮ್ಮ ನಾಟಕ ಜನಗಳ ಕಣ್ಣಿಗೆ ಬಿದ್ದದ್ದು.”

“ಎಲ್ಲಾ ಭಗವಂತನ ಇಚ್ಛೆ. ಒಂದು ಮಾತು ಸ್ವಾಮಿ, ಪ್ರವಾಸ ಮುಗಿಸಿಕೊಂಡು ಬಂದ ಮೇಲೆ ನೀವು ಏನು ಮಾಡುತ್ತೀರಿ?”

“ಅದಿನ್ನೂ ನಿಶ್ಚಯವಾಗಿಲ್ಲ.”

“ಮತ್ತೆ ಕಾಲೇಜಿಗೆ ಹೋಗ್ತೀರಾ?”

“ಕಾಲೇಜಿಗೂ ನಂಗೂ ಋಣಾನುಬಂಧ ಹರಿದಂತೆ ಕಾಣತ್ತೆ.”

“ಹಾಗಾದರೆ...........?”

“ನಿಮ್ಮ ಮೇಲ್ಪಂಕ್ತಿ.”

“ಕಂಪೆನಿ ಸೇರುತ್ತೀರಾ?”

“ಅದೂ ಯೋಚನೆ ಇದೆ.”

“ನೀವು ಹಾಗೆ ನಿಶ್ಚಯಮಾಡಿದರೆ ನಮ್ಮನ್ನ ಮರೀಬೇಡಿ.”

“ಆದರೆ...........”

“ಏನು ಹೇಳಿ, ಸಂಕೋಚಪಡಬೇಡಿ.”

"ಖಂಡಿತವಾಗಿ ಮಾತನಾಡ್ತೀನೀಂತ ಕೋಪಿಸಿಕೊಳ್ಳಬಾರದು ಬುಳ್ಳಪ್ಪನವರೇ."

"ಇಲ್ಲ ಹೇಳೀ ಸ್ವಾಮಿ."

"ನಾಟಕದಲ್ಲಿ ಕೆಲಸಮಾಡಬೇಕು. ರಂಗಭೂಮಿಯ ಸೇವೆಗೆ ತನು, ಮನ, ಧನವನ್ನರ್ಪಿಸಬೇಕು ಎಂದು ಮನಸ್ಸು ಹಾತೊರೆಯುತ್ತಿದೆ. ಆದರೆ ನಿಮ್ಮ ಕಂಪೆನಿಯ ಒಳಗಿನ ಪರಿಸ್ಥಿತಿ ನೋಡಿ ಎದೆನಡುಕ ಬರುತ್ತದೆ. ಆ ನಟರು, ಅವರ ನಡೆನುಡಿ, ರಂಗಮಂದಿರವೆಲ್ಲಾ ಹೆಂಡದ ಗಡಂಗಾಗಿರುವುದು ನೋಡಿ ಬಲು ಹೇಸಿಕೆ ಬರುತ್ತದೆ. ನಮ್ಮಂತಹವರು ಈ ಸಹವಾಸ ಮಾಡುವುದು ಹೇಗೆ?"

"ನೋಡೀ ಸ್ವಾಮಿ, ನಾನು ಅರಿಯದ ಮುಕ್ಕ. ಓನಾಮ ಕೂಡ ನನಗೆ ಬರೋದಿಲ್ಲ. ಏನೋ ಅದೃಷ್ಟಬಲದಿಂದ ಕಂಪೆನಿ ನಡಸಿಕೊಂಡು ಹೋಗ್ತಾ ಇದ್ದೀನಿ. ನಮಗೆ ಸಿಕ್ಕೋರು ನೀವು ಹೇಳಿದಂತಹ ಜನವೇ. ನಿಮ್ಮಂತಹವರು ಬಂದು, ನಿಂತುಕೊಂಡು ನಮಗೂ ದಾರಿ ತೋರಿಸಿಕೊಟ್ಟರೆ ನಾವೂ ಸರಿಯಾಗಿ ಇರಲು ಸಾಧ್ಯ. ವಿದ್ಯಾವಂತರು ನಾಟಕ ನೋಡೋದಿಕ್ಕೇ ಬರೋದಿಲ್ಲ. ಇನ್ನು ನಮ್ಮ ಜತೆ ಸೇರುತ್ತಾರೆಯೇ? ಹೀಗಾಗಿ ನಾವು ನಾವೇ, ನೀವು ನೀವೇ?"

"ನಿಮ್ಮ ಮಾತಿನಲ್ಲಿ ಬಹಳ ಸತ್ಯವಿದೆ ಬುಳ್ಳಪ್ಪನವರೇ"

"ನೀವು ಬನ್ನಿ ಸ್ವಾಮಿ, ನೀವೇ ಪ್ರಾಕ್ಟಿಸ್ ಮ್ಯಾನೇಜರ್ ಆಗಿ. ಬೇಕಾದ ನಾಟಕ ತೊಗೋಳಿ. ಯಾವ ನಟಬೇಕು ಹೇಳಿ ನಾನು ತಂದು ಕೊಡುತ್ತೇನೆ. ಬೇರೆ ಕಂಪೆನಿಯಲ್ಲಿದ್ದರೆ ಬಿಡಿಸಿಯಾದರೂ ಕರ್ಕೊಂಡು ಬರ್ತೀನೆ. ನಿಮಗೆ ಎಷ್ಟು ದುಡ್ಡು ಬೇಕೋ ತೆಗೆದುಕೊಳ್ಳಿ. ನಿಮ್ಮ ಕೈಗೆ ಅಡ್ಡಿಯಾರು? ಎಲ್ಲಾ ನಿಮ್ಮದೇ ಆಗಿರತ್ತೆ."

"ಆಗಲಿ ಬುಳ್ಳಪ್ಪನವರೇ. ಸದ್ಯಕ್ಕೆ ನಮ್ಮ ಪ್ರವಾಸ ಮುಗಿಯಲಿ. ಪರೀಕ್ಷೆಯ ಗತಿ ಏನಾಯಿತು ನೋಡಿಕೊಂಡು ಮುಂದಿನ ಯೋಚನೆ ಮಾಡುತ್ತೇನೆ. ನೀವು ಬೆಂಗಳೂರು ಕ್ಯಾಂಪ್ ಮುಗಿಸಿಕೊಂಡು ಎಲ್ಲಿಗೆ ಹೋಗುತ್ತೀರಿ."

"ಮೈಸೂರಿಗೆ. ಆದರೆ ಇಲ್ಲೇ ಇನ್ನೂ ಎರಡು ತಿಂಗಳಿರಬೇಕೆಂದು ನಿಶ್ಚಯಿಸಿದ್ದೇವೆ."

“ಸರಿ, ಹಾಗಾದರೆ.”

“ಅಂತೂ, ನಾನು ಹೇಳಿದ್ದು ಮರೀಬೇಡಿ ಸ್ವಾಮಿ.” ಎಂದು ಬುಳ್ಳಪ್ಪ ಮತ್ತೆ ಎಚ್ಚರಿಸಿ ಹೊರಟ. ಆಕಸ್ಮಿಕವಾಗಿ ಒದಗಿಬಂದ ಈ ಅವಕಾಶವನ್ನು ನೋಡಿ ರಾಜ ವಿಚಾರಪರವಶನಾದ. “ಅಂತೂ, ವಿಧಿ ನನ್ನನ್ನು ನಾಟಕಕ್ಕೇ ಒಯ್ಯುತ್ತಿದೆ. ಅದೇ ನನ್ನ ಜೀವನದ ಗುರಿ; ಪ್ರಾಯಶಃ ಜೀವನದ ಗೋರಿಯೂ ಅದೇ” ಎಂದು. ಆದರೂ ಒಂದು ನಿರ್ಣಯಕ್ಕೆ ಬರುವಷ್ಟು ಮನಸ್ಸು ಸ್ಥಿಮಿತವಾಗಲಿಲ್ಲ. ಬುಳ್ಳಪ್ಪನ ಮಾತನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡು ವಿಚಾರಮಾಡತೊಡಗಿದ. ನನ್ನಿಂದ–ನನ್ನಂತಹವರಿಂದ ಬುಳ್ಳಪ್ಪನ ಕಂಪೆನಿ — ಅಂತಹ ಕಂಪೆನಿಗಳ ಪರಿಸ್ಥಿತಿ ಮಾರ್ಪಾಟಾಗಲು ಶಕ್ಯವೇ? ನಾಟಕಲಕ್ಷ್ಮಿಯನ್ನು ಈಗಿನ ಬಂಧನದಿಂದ ವಿಮೋಚನಗೊಳಿಸಿ ಶುದ್ಧ ಕಲೆಯ ಶ್ವೇತಪದ್ಮದ ಮೇಲೆ ಮತ್ತೆ ಪ್ರತಿಷ್ಠಿಸಲಾಗುವುದೇ? ಆ ಕೆಲಸ ನನ್ನಿಂದಾಗುತ್ತದೆಯೇ? ಅಲ್ಲಿ ಒದಗುವ ಅನಂತಕಷ್ಟಗಳನ್ನು ನಾನು ನಿವಾರಿಸಬಲ್ಲೆನೆ. ನನ್ನ ಶೀಲವನ್ನು ಕಾಪಾಡಿಕೊಂಡು ಹೊನ್ನು, ಹೆಣ್ಣಿನ ಆಶೆಯನ್ನು ತೊರೆದು ಕಲೆಯ ಕೆಲಸವನ್ನು ಒಂದು ತಪಸ್ಸೆಂದು ಭಾವಿಸಿ ನಿರ್ವಹಿಸಬಲ್ಲೆನೆ. ಸಮಸ್ಯೆ ವಿಚಾರಕ್ಕೆ ಬಗೆಹರಿಯದಾಯಿತು. ಬುದ್ಧಿ ಸೋಲನ್ನೊಪ್ಪಿಕೊಳ್ಳಬೇಕಾಯಿತು. ಒಂದು ಪ್ರಶ್ನೆಗೆ ಉತ್ತರ ದೊರೆತಂತಾದರೆ ಮತ್ತೆ ನಾಲ್ಕಾರು ಉಪಪ್ರಶ್ನೆಗಳು ಏಳುತ್ತಿದ್ದವು. ಈ ವಿಚಾರದ ಗೊಂದಲವನ್ನು ಬಿಟ್ಟು ಹೆಣ್ಣಿನ ಸಹಜಗುಣದ ವಿಮರ್ಶೆಯನ್ನು ತಿಳಿಯುವ ಎಂದು ನೀಲನ ಮನೆಯ ಕಡೆ ಹೊರಟ.

ನಾಟಕವಾಗಿ ಎರಡು ದಿವಸಗಳಾದರೂ ನೀಲನನ್ನು ನೋಡಲು ಹೋಗಿರಲಿಲ್ಲ. ಅವಳನ್ನು ಹೋಗಿ ಮೇಲಿಂದ ಮೇಲೆ ನೋಡಬೇಕು, ಅವಳ ಜತೆಯಲ್ಲಿರಬೇಕು ಎಂದು ಆಸೆ. ಆದರೆ ಅವಳ ಮನೆಯ ಘೋರ ವ್ಯಾಪಾರ ಅವನ ಆಸೆಯನ್ನು ನಿರಾಶೆಗೊಳಿಸುತ್ತಿತ್ತು. ನೀಲಾ ರೂಪವತಿ ಸಹಜ, ಗುಣವತಿಯೂ ಹೌದು. ಅದೊಂದು ಕೆಸರಿನ ಕಮಲ. ಆದರೆ ತನ್ನ ಆಕರ್ಷಣೆ ಅವಳ ರೂಪದ ಸಲುವಾಗಿಯೆ. ಅವಳ ಸೌಂದರ್ಯದ ಅನಂತ ರಾಶಿಯಲ್ಲಿ ಲೀನವಾಗುವುದು ತನಗೆ ಅತ್ಯಂತ ಪ್ರಿಯವಾದ ಕೆಲಸ. ಆದರೆ

ದಂತೆ. ಅದೂ ಕೇವಲ ಇಂದ್ರಿಯಾಸಕ್ತಿಯೇ. ಇಲ್ಲ–ಹಾಗಿರಲಿಲ್ಲ. ಕೇವಲ ಬುದ್ಧಿಯ ಜಗತ್ತಿನಲ್ಲಿ, ತತ್ತ್ವಗಳ ವಿಚಾರದಲ್ಲಿ ಅವಳೊಂದಿಗೆ ಅನೇಕ ಗಂಟೆಗಳನ್ನು ಕಳೆದಿದ್ದನು. ಗಂಡು, ಹೆಣ್ಣೆಂಬ ಭಾವನೆಯನ್ನು ಮರೆತು ವಿವೇಕ, ವಿಚಾರಗಳ ಎರಡುಮುಖಗಳಂತೆ ತಮ್ಮ ಬಾಳು–ಬದುಕು ಕೆಲವು ದಿನವಾದರೂ ಸಾಗಿತ್ತು. ಅವಳಾದರೋ ತನ್ನ ಹೆಣ್ತನವೊಂದೇ ಬಂಡವಾಳವೆಂದು ಭಾವಿಸುತ್ತಿದ್ದ ಜೀವವಾಗಿರಲಿಲ್ಲ. ಕಲೆಯಲ್ಲಿ ಹೆಚ್ಚು ಸಾರ್ಥಕ್ಯವನ್ನು ಪಡೆಯದಿದ್ದರೂ ಅವಳ ಆತ್ಮ ಕಲಾಮಯವಾಗಿತ್ತು. ಕಲೆಯ ಅನಂತ ಆಕಾಶದಲ್ಲಿ ಅವಳು ಪರಿಶುದ್ಧವಾದ ಆನಂದವನ್ನು ಕಂಡಿದ್ದಳು. ಜತೆಗೆ ಹುಟ್ಟನ್ನು ಮರೆತು ಕಲಾಭಿಜ್ಞತೆಯೊಂದಿಗೆ ಬೆಳೆಯುವ ಅಂತರಂಗ ಪರಿಜ್ಞಾನ ಅವಳಲ್ಲಿ ಪೂರ್ಣ ವಿಕಾಸಗೊಂಡಿತ್ತು.

ನೀಲಾ ಕೋಪಗೊಂಡಂತಿತ್ತು. ರಾಜನನ್ನು ನೋಡಿದ ಕೂಡಲೆ ಮೊದಲೇ ಕೆಂಪಗಿದ್ದ ಅವಳ ಮುಖ ಮತ್ತಷ್ಟು ಕೆಂಪೇರಿತು. ಚೆಂಗುಲಾಬಿಯನ್ನು ಅರುಣಚ್ಛವಿ ಮುದ್ದಿಟ್ಟಂತಾಗಿತ್ತು. ಆಶ್ಚರ್ಯ, ಉದ್ವೇಗಗಳು ಅವಳ ದೇಹಾದ್ಯಂತವನ್ನೂ ವ್ಯಾಪಿಸಿದವು. ಕೊಂಕುನುಡಿದು ತನ್ನ ಕೋಪವನ್ನು ಹೊರಗೆಡಹುತ್ತಾಳೆಂದು ರಾಜ ನಿರೀಕ್ಷಿಸಿದ. ಆದರೆ ಅವಳು ಅತ್ಯಂತ ವಿನಯ, ಸೌಜನ್ಯಗಳಿಂದ ಅವನನ್ನು ಬರಮಾಡಿಕೊಂಡಳು.

“ನಿನಗೆ ಕೋಪಬಂದಿರಬಹುದೆಂದಿದ್ದೆ ನೀಲಾ.”

“ಕೋಪವೇಕೆ?”

“ನಾನು ಇತ್ತ ಕಡೆ ಬರಲಿಲ್ಲವೆಂದು.”

“ಬರಲಿಲ್ಲವೆಂದು ದುಃಖವಷ್ಟೇ ಕೋಪವಲ್ಲ.”

“ನೀನು ಹೇಳುತ್ತಿರುವುದು ತಾತ್ಸಾರದ ಒಂದು ಲಕ್ಷಣ.”

“ದೇವರು ಬಾಯಿಗೆ ಮಾತು ಕೊಟ್ಟಿದ್ದಾನೆ, ಹೃದಯಕ್ಕಲ್ಲ.”

“ಹಾಗಾದರೆ ಕೋಪವೇಕೆ ಬರಲಿಲ್ಲ.”

“ನಾನು ಕೋಪಿಸಿಕೊಳ್ಳಲಿಲ್ಲವೆಂದು ನೀವು ಕೋಪಿಸಿಕೊಳ್ಳುತ್ತಿರುವ ಹಾಗಿದೆ.”

“ಹೌದು, ಏಕೆ ಹೇಳು?”

“ಆರಾಧ್ಯದೇವತೆಯ ಮೇಲೆ ಕೋಪಿಸಿಕೊಳ್ಳಲು ಭಕ್ತಳಿಗೆ ಹಕ್ಕಿಲ್ಲ.”

"ಪ್ರೇಯಸಿ ಭಕ್ತಳಾದುದೆಂದಿನಿಂದ."

"ಪ್ರೇಮವೂ ಭಕ್ತಿಯ ಒಂದು ರೂಪ."

"ನಿನ್ನ ಮಾತಿನಲ್ಲಿ ಒಂದು ತೃಪ್ತಿ–ಶಾಂತಿ ತುಂಬಿದೆ ಏತರಿಂದ?"

"ಹಕ್ಕಿ ತನ್ನ ಗೂಡು ಕಾಣದೆ ತೊಳಲಾಡುತ್ತಿತ್ತು. ಅದಕ್ಕೆ ತನ್ನ ಗೂಡು ಸಿಕ್ಕಿತು."

"ನನಗೆ!"

"ಹೌದು ನಿಮಗೆ."

"ಅದು ಗೂಡೋ, ಬೇಟೆಗಾರನ ಬಲೆಯೋ ಬಲ್ಲವರಾರು."

"ನಾನು."

"ನೀನು!—ಹೇಗೆ?"

"ಹೆಂಗಸಿನ ಕರುಳಿಗೆ ಭವಿಷ್ಯವನ್ನರಿಯುವ ಒಂದು ಮಹಾಶಕ್ತಿಯಿದೆ."

"ಎಲ್ಲ ಹೆಂಗಸರಿಗೂ."

"ಎಲ್ಲರಿಗೂ ಇದೆ."

"ಅದೇಕೆ ಕಂಡುಬರುವುದಿಲ್ಲ."

"ಅನೇಕರು ಅದನ್ನು ಉಪಯೋಗಿಸುವುದಿಲ್ಲ. ತೆಗೆಯದೆ ಅದನ್ನು ಮುಚ್ಚಿಮುಚ್ಚಿ ಇಂಗಿಸಿಬಿಡುತ್ತಾರೆ."

"ನಿನ್ನ ಕರುಳಿನ ಕಣ್ಣು ಕಂಡುದೇನು?"

"ನಿಮ್ಮ ಭವಿಷ್ಯ."

"ಅದು ಹೇಗಿದೆ ಹೇಳು, ಕೇಳೋಣ."

"ನಿಮಗೆ ಗೊತ್ತಿದ್ದದ್ದೇ. ನಾಟಕ ಕಲೆಯ ಸಾರ್ವಭೌಮರು ನೀವು."

"ಮೊನ್ನಿನ ನಾಟಕ ನೋಡಿ ಅಷ್ಟು ನಂಬಿಕೆ ಹುಟ್ಟಿತೇ?"

"ನಾಟಕ ನೋಡುವುದಕ್ಕೆ ಮೊದಲೇ ಹುಟ್ಟಿತ್ತು. ನೋಡಿದ ಮೇಲೆ ನಂಬಿಕೆ ಬಲಗೊಂಡಿತು."

"ಆ ನಂಬಿಕೆ ಪ್ರೇಮದಿಂದ ಹುಟ್ಟುವ ಭ್ರಾಂತಿ."

"ಎಂದಿಗೂ ಅಲ್ಲ. ಏಕೆ ಹಾಗೆನ್ನುವಿರಿ."

"ನಿನ್ನ ನಂಬಿಕೆ ನನಗೂ ಹುಟ್ಟಬೇಡವೇ?"

" ಹುಟ್ಟಬೇಕು. ನಿಮಗೆ ನಂಬಿಕೆ ಸಾಲದೇನು ? "

" ಮೊನ್ನಿನ ನಾಟಕದಿಂದ ನನ್ನಲ್ಲಿ ಪೂರ್ಣ ಅತೃಪ್ತಿ ಹುಟ್ಟಿದೆ."

" ಏತರಿಂದ ? "

" ಮಹಾಕವಿಯ ಅಮರಕೃತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅಂದಗೆಡಿಸುತ್ತಿದ್ದೇನಲ್ಲಾ ಎಂಬ ದುಃಖ ನನ್ನನ್ನು ಆವರಿಸಿತ್ತು."

" ನೀವೇನೂ ಅಂದಗೆಡಿಸಲಿಲ್ಲವಲ್ಲಾ. "

" ಮಾತುಗಳನ್ನು ಗಿಣಿಪಾಠ ಮಾಡಿ ಒಪ್ಪಿಸಿದರೆ ಬಂತೇ ಭಾಗ್ಯ ನೀಲಾ. ನಟನಿಗೆ ಸಾಕಷ್ಟು ಅನುಭವ ಬೇಕು, ವಿಚಾರ ಬೇಕು, ಸಂಸ್ಕೃತಿ ಬೇಕು. ಅವೊಂದೂ ನನ್ನಲ್ಲಿಲ್ಲ."

" ನಿಮಗೆ ನೀವೇ ಅನ್ಯಾಯಮಾಡಿಕೊಳ್ಳುತ್ತಿರುವಿರಿ. ನಿಮ್ಮಲ್ಲಿ ಎಲ್ಲಾ ಇದೆ. ಅವುಗಳ ಬೆಳವಣಿಗೆ ಅವಕಾಶಕೊಟ್ಟರೆ ಅವು ಪ್ರಕಾಶಿಸುತ್ತವೆ."

" ಇದೊಂದು ಸೋಜಿಗವೇ ನೋಡು. ಬುಳ್ಳಪ್ಪನ ಭೇಟಿಯಾಗಿತ್ತು. ನಾಟಕವನ್ನೇ ವೃತ್ತಿಯಾಗಿ ಅವಲಂಬಿಸಬೇಕೆಂದು ಅವನೂ ಒತ್ತಾಯ ಪಡಿಸಿದ. ಅವನ ಕಂಪೆನಿಯಲ್ಲಿ ನನಗಾಗಿ ಸ್ಥಾನ ಕಾದಿಟ್ಟಿದ್ದಾನಂತೆ. ನಿಮಗಿರುವ ನಂಬಿಕೆ, ಧೈರ್ಯ ನನ್ನಲ್ಲಿ ಹುಟ್ಟದಲ್ಲಾ."

" ನೀರು ಕೊರೆಯುತ್ತದೆಂದು ಅಂಜಿ ನದೀತೀರದಲ್ಲಿ ನಿಂತಿರುವ ತನಕ ಚಳಿ ಬಿಡುವುದೇ ಇಲ್ಲ. ಒಮ್ಮೆ ಧೈರ್ಯಮಾಡಿ ನದಿಗೆ ಇಳಿದುಬಿಡಬೇಕು."

" ನನ್ನ ಮನಸ್ಸು ಒಮ್ಮೆ ಹಾಗೆ ಹೇಳುತ್ತದೆ. ಸದ್ಯ ನಾವು ಹುಬ್ಬಳ್ಳಿ ಧಾರವಾಡ ಪ್ರವಾಸ ಹೋಗಿ ಬರಬೇಕೂಂತಿದ್ದೇವೆ. ಅದು ಮುಗಿಯಲಿ. ಆ ವೇಳೆಗೆ ಪರೀಕ್ಷೆಯ ಹಣೆಬರಹವೂ ಗೊತ್ತಾಗುತ್ತದೆ. ಮುಂದೆ—ಏನೂ ಇಲ್ಲದಿದ್ದರೆ ಬುಳ್ಳಪ್ಪನ ಕಂಪೆನಿ ಇದ್ದೇ ಇದೆ."

ನೀಲ ಮಾಡಿದ ನಿರ್ಧಾರ, ಸೂಚಿಸಿದ ದಾರಿಗಾಗಿ ಅವಳಿಗೆ ಮನಸ್ಸಿನಲ್ಲಿಯೇ ಕೃತಜ್ಞತೆಯನ್ನರ್ಪಿಸಿದ. ತನ್ನನ್ನು ಆವರಿಸಿದ್ದ ಕಳವಳ ಬಹುಮಟ್ಟಿಗೆ ಕಡಿಮೆಯಾದಂತಾಗಿತ್ತು.

ಪ್ರವಾಸ ಸಾಗಿತು. ಆದರೆ ಪ್ರಯಾಸಕ್ಕೆ ಸಾಕಷ್ಟು ಪ್ರತಿಫಲ ದೊರೆಯಲಿಲ್ಲ. ಹಣಸಂಗ್ರಹ ಪ್ರಯಾಣದ ಉದ್ದಿಶ್ಯವಾಗಿರಲಿಲ್ಲವಾದ್ದರಿಂದ ಗೆಳೆಯರು ನಿರಾಶೆಗೊಳ್ಳಲಿಲ್ಲ. ಧಾರವಾಡದ ನಾಗರಿಕರು 'ಶಾಕುಂತಲ' ನಾಟಕವನ್ನು ಬಹಳ ಮೆಚ್ಚಿಕೊಂಡರು. ರಾಜನಿಗೂ ಅವನ ಪರಿವಾರಕ್ಕೂ ಉತ್ತರ ಕರ್ನಾಟಕದ ಕಲಾಭಿಮಾನಿಗಳು ಸತ್ಕಾರ ಕೂಟಗಳನ್ನೇರ್ಪಡಿಸಿ ಗೌರವಿಸಿದರು. ಪ್ರತಿಯೊಂದು ಕಡೆಯಿಂದ ಹೊರಡುತ್ತಿದ್ದ ಧ್ವನಿಯಲ್ಲಿಯೂ ರಾಜನಿಗೆ ಒಂದೇ ಪಲ್ಲವಿ ಕೇಳಬರುತ್ತಿತ್ತು. "ರಂಗಭೂಮಿ ನಿನ್ನದು. ನೀನು ಅದಕ್ಕೆ ಸೇರಿದವನು. ನಿನ್ನ ಬಾಳು ಅದರ ಸೇವೆಗೆ ಮೀಸಲಾಗಬೇಕು."

ಪ್ರವಾಸ ಮುಗಿಯುವ ಸಮಯಕ್ಕೆ ಮಂಡಳಿಯಲ್ಲಿ ಒಡಕು ಹುಟ್ಟಿತು. ದೇವದಾಸನ ಕಣ್ವ ಪಾತ್ರವನ್ನು ಕುರಿತು ಧಾರವಾಡದ ಒಂದು ಪತ್ರಿಕೆ ಟೀಕಿಸಿತ್ತು. ಅದನ್ನು ಓದಿ ಅವನು ಕೆರಳಿದ್ದ. ಉರಿಯುತ್ತಿದ್ದ ಬೆಂಕಿಗೆ ತುಪ್ಪ ಹುಯಿದ ಹಾಗೆ ಸೀತಾರಾಮಯ್ಯಂಗಾರ್ ಪತ್ರಿಕೆಯ ಟೀಕೆಯನ್ನು ಸಮರ್ಥಿಸಿ ಮಾತನಾಡಿದ. ಮಾತಿನ ಹಗರಣ ಕೈ ಕೈ ಮಿಲಾಯಿಸುವುದರವರೆಗೆ ಹೋಯಿತು. ಅಂತೂ ಸಂಜೆಯ ನಾಟಕ ಸಂಧಾನದ ಫಲದಿಂದ ನಡೆಯಿತು. ಯಾರಿಗೂ ಸಮಾಧಾನವಿಲ್ಲ. ನಾಟಕ ಯಾರಿಗೂ ತೃಪ್ತಿಯನ್ನುಂಟುಮಾಡಲಿಲ್ಲ.

ಮಂಡಳಿ ಊರುಬಿಟ್ಟು ಮೂರು ವಾರಗಳ ಮೇಲಾಗಿದ್ದವು. ಇನ್ನು ಸ್ವಲ್ಪ ಮುಂದಕ್ಕೆ ಹೋಗಿ ಬೆಳಗಾಂವಿ, ಅಥಣಿಗಳಲ್ಲಿ ನಾಟಕವಾಡಿ ಬರಬೇಕೆಂದು ರಾಜನ ಮನಸ್ಸಿನಲ್ಲಿತ್ತು. ಆದರೆ ಮನೆಯಲ್ಲಿ ಒಡಕು ಹುಟ್ಟಿದ ಮೇಲೆ ಇನ್ನು ಹೊರಗಿರುವುದು ಸರಿಯಲ್ಲವೆಂದು ಭಾವಿಸಿ, ಪ್ರವಾಸವನ್ನು ಕೊನೆಗಾಣಿಸಬೇಕಾಯಿತು.

ಊರಿಗೆ ಹಿಂದಿರುಗಿದ ಮೇಲೆ ಯೂನಿಯನ್ ಅನಾದರಣೆಗೆ ಗುರಿಯಾಗುತ್ತ ಬಂತು. ಯಾವಾಗಲಾದರೂ ಒಬ್ಬೊಬ್ಬರು ಬರುತ್ತಿದ್ದರು. ಸ್ವಲ್ಪ ಹೊತ್ತಿದ್ದು ಹರಟೆಕೊಚ್ಚಿ ಹೋಗುತ್ತಿದ್ದರು. ಮೊದಲಿನ ಹಾಗೆ ಒಟ್ಟಿಗೆ ಸೇರುವುದು, ನಾಟಕದ ಅಭ್ಯಾಸಮಾಡುವುದು ನಿಂತೇಹೋಯಿತು.

ಪರೀಕ್ಷೆಯ ಫಲಿತಾಂಶವೂ ಹೊರಬಿತ್ತು. ರಾಜ ನಿರೀಕ್ಷಿಸಿದಂತೆಯೇ ಆಗಿದ್ದುದರಿಂದ ಅವನಿಗೆ ಆಶ್ಚರ್ಯವೂ ಆಗಲಿಲ್ಲ ದುಃಖವೂ ಆಗಲಿಲ್ಲ. ದೇವದಾಸ ಮೊದಲನೆಯ ತರಗತಿಯಲ್ಲಿ ಬಂದಿದ್ದ; ತಿರುಮಲ, ಸೀತಾರಾಮು ತೇರ್ಗಡೆಯಾಗಿದ್ದರು; ತನಗೂ ಅಚ್ಯುತನಿಗೂ ನಾಪಾಸಾಗಿತ್ತು. ಅಚ್ಯುತನ ಸ್ಥಿತಿಗೆ ಮರುಗಿದನು. ತನ್ನ ಸಹವಾಸ ಸೇರಿ ಅವನಿಗೆ ಸೋಲಾಯಿತೇನೋ ಎಂಬ ದುಃಖ ಬೇರೆ ಆವರಿಸಿತು. ದೇವದಾಸ ಲೆಕ್ಕಹಾಕಿದಂತೆ ಅವನಿಗೆ ರ್‍ಯಾಂಕ್ ಬಂದಿದ್ದರೂ ತಿರುಮಲ, ಸೀತಾರಾಮು ನಾಟಕದಲ್ಲಿ ಓಡಿಯಾಡುತ್ತಿದ್ದರೂ ತೇರ್ಗಡೆಯಾಗಿದ್ದುದು ಸಮಾಧಾನವನ್ನು ತಂದಿತ್ತು. ಎಲ್ಲರೂ ನಾಪಾಸಾಗಿ ಬಿಟ್ಟಿದ್ದರೆ, ನಾಟಕದಿಂದ ಹುಡುಗರು ಕೆಟ್ಟರು ಎಂದು ಅಪಖ್ಯಾತಿ ಬರುತ್ತಿತ್ತಲ್ಲಾ, ಸದ್ಯ ಅದು ತಪ್ಪಿತು ಎಂದು ಭಾವಿಸಿದನು.

ತನ್ನ ಸೋಲಿನ ಸುದ್ದಿಯನ್ನು ಹೊತ್ತು ತಂದೆಗೆ ಮುಖತೋರಿಸುವುದು ಹೇಗೆ? ಮಗ ಅಸಿಸ್ಟೆಂಟ್ ಕಮೀಷನರ್ ಆಗುತ್ತಾನೆಂದು ಅವರು ಕಂಡಿದ್ದ ಕನಸು ಒಡೆದುಹೋಯಿತಲ್ಲಾ. ಅವರು ಸಹಿಸುವರೇ? ಎಂಬ ಭಯವೊಂದು ಕಡೆ. ಇನ್ನೆಷ್ಟು ದಿವಸ ತನ್ನ ಹೆಂಡತಿ—ಲೋಕಕ್ಕೆ ಬರುತ್ತಿದ್ದ ಮಗುವನ್ನು ಅವರ ಆಶ್ರಯದಲ್ಲಿ ಬಿಟ್ಟಿರುವುದು. ತನ್ನ ಪಾಡು ಹೇಗೋ ಆಗುತ್ತದೆ ಆದರೆ ಹೆಂಡತಿ ಮಗುವನ್ನು ಸಾಕುವುದು ಹೇಗೆ? ಎಂಬ ಚಿಂತೆ ಆವರಿಸಿತು.

ತಂದೆ ಮನೆಗೆ ಬರುವ ಹೊತ್ತಿಗೆ ಮಗನ ಸೋಲಿನ ಸುದ್ದಿಯನ್ನು ತಿಳಿದು ಕೆಂಡಕೆಂಡವಾಗಿಯೇ ಬಂದರು. ಕೋಪದಲ್ಲಿಯೇ ದೊಣ್ಣೆ, ಉತ್ತರೀಯ, ಅಂಗಿರುಮಾಲುಗಳನ್ನು ಬಿಸಾಡಿ 'ರಾಜಾ' ಎಂದು ಕರೆದರು. ರಾಜ ಹೋಗಿ ಎದುರಿಗೆ ನಿಂತ.

"ಪರೀಕ್ಷೆ ಏನಾಯಿತು?"

"ಫೇಲ್ ಆಯಿತು."

"ಫೇಲಾಯಿತಂತೆ ಫೇಲು, ಹೇಳುವುದಕ್ಕೆ ನಾಚಿಕೆಯಾಗುವುದಿಲ್ಲವೇ?"

ರಾಜ ನಿರುತ್ತರನಾದ.

"ಮಗ ಓದಿ, ಪ್ಯಾಸುಮಾಡಿ, ಕಟ್ಟಿಕಡಿದು, ದೊಡ್ಡ ಅಧಿಕಾರ ಸಂಪಾದಿಸಿ ನನ್ನ ಉದ್ಧಾರಮಾಡುತ್ತಾನಂತಿದ್ದೆ. ನಿನಗೇಕೆ ಓದು ಬರಹ,

ತಿರುಬೋಕಿಗಳನ್ನು ಕಟ್ಟಿಕೊಂಡು ನಾಟಕವಾಡು. ನಾಟಕವಂತೆ ನಾಟಕ. ನಾಳೆ ನಾಟಕ ನಿಂಗೆ ಹೊಟ್ಟೆಗೆ ಬಟ್ಟೆಗೆ ಕೊಡುತ್ತೆ."

ಏನು ಹೇಳಬೇಕೋ ರಾಜನಿಗೆ ತೋರಲಿಲ್ಲ. ಕೋಪದ ಹೊತ್ತು. ಯಾವ ಮಾತನಾಡಿದರೂ ಅದು ವಿಪರೀತಕ್ಕೆ ಹೋಗುವ ಸಂಭವ. ತಂದೆ ಕೋಪವನ್ನೆಲ್ಲಾ ಒಮ್ಮೆ ಮುಗಿಸಿಬಿಡಲಿ ಎಂದು ಸುಮ್ಮನಿದ್ದ. ಅದನ್ನು ನೋಡಿಯೇ ನರಸಿಂಹಾಚಾರ್ಯರಿಗೆ ಮತ್ತಷ್ಟು ರೇಗಿತು.

"ಏನು ದೆವ್ವದ ಹಾಗೆ ನಿಂತಿದ್ದೀ. ಮುಂದೇನು ಮಾಡುತ್ತೀ ಹೇಳು?"

"ನಾನೇನು ಹೇಳಲಪ್ಪಾ."

"ನಿಮ್ಮಪ್ಪ ಕೋಟ್ಯಾಧೀಶ್ವರನಲ್ಲ. ಇನ್ನು ಮುಂದೆ ನಿನ್ನ ವ್ಯಾಸಂಗಕ್ಕೆ ನಾನು ಹಣ ಒದಗಿಸಲಾರೆ. ಮುಂದಿನ ಕಥೆ ನೀನೇ ನೋಡಿಕೊಳ್ಳಬೇಕು."

"ಹಾಗಾದರೆ ಕಾಲೇಜ್ ಬಿಟ್ಟುಬಿಡಲೇ?"

"ಬಿಟ್ಟಾದರೂ ಬಿಡು, ಕಟ್ಟಾದರೂ ಕಟ್ಟಿಕೋ" ಎಂದು ಎದ್ದು ಒಳಗೆ ಹೊರಟುಹೋದರು. ರಾಜನಿಗೆ ಇದು ಘೋರ ಶಾಸನದಂತೆ ಆಯಿತು. ಕಾಲೇಜಿನ ವ್ಯಾಸಂಗದ ಮೇಲೆ ಅವನಿಗೆ ಮಮತೆ ಇಲ್ಲದಿದ್ದರೂ ಕಾಲೇಜಿನ ಜೀವನವನ್ನು ಬಹಳ ಪ್ರೀತಿಸುತ್ತಿದ್ದ. ತನ್ನ ಜೀವಮಾನದ ನಾಲ್ಕು ಸಂತೋಷದ ದಿವಸಗಳು ಕಾಲೇಜಿನಲ್ಲಿದ್ದ ದಿನಗಳೆಂದು ಅವನಿಗೆ ಗೊತ್ತು. ಗೆಳೆಯರ ಮೈತ್ರಿ, ಆಟದ ಬಯಲಿನ ವಾತಾವರಣ, ಪ್ರಿನ್ಸಿಪಾಲರ ದೊಡ್ಡ ನಡತೆ ಅವನ ಬಾಳಿಗೆ ಬೆಳಕನ್ನು ನೀಡಿದ್ದವು. ಅವುಗಳೆಲ್ಲವನ್ನೂ ತ್ಯಜಿಸಬೇಕಲ್ಲಾ ಎಂದು ಮನಸ್ಸು ಮರುಗಿತು. "ನನ್ನನ್ನು ಜೀವನದ ಗುರಿಯಾದ ರಂಗಭೂಮಿಯ ಕಡೆಗೆ ಒಯ್ಯುವುದಕ್ಕೆ ಇದೂ ಒಂದು ಸಂಕೇತವೋ. ವಿಧಿಯೇ ಈ ರೀತಿ ತನ್ನ ಜೀವನವನ್ನು ರೂಪಗೊಳಿಸುತ್ತಿದೆಯೇ. ನನ್ನ ಕಾಲೇಜು ಜೀವನರಂಗದಲ್ಲಿ ಆರಂಭವಾಗುವುದಿದೆಯೇ" ಎಂದು ಯೋಚಿಸಿದನು. ಅವ್ಯಕ್ತವು ಮುಂದಿಟ್ಟುಕೊಂಡಿದ್ದ ಜೀವನರಹಸ್ಯವನ್ನರಿಯುವ ಕುತೂಹಲ ಒಂದು ಬಗೆಯ ಆನಂದವನ್ನುಂಟುಮಾಡಿತು. ಅದರ ಜತೆಗೆ ಕಾಣದ ಲೋಕದ ಭಯವೂ ಆವರಿಸಿತು.

ತಂದೆಮಕ್ಕಳ ವಾದವನ್ನು ಸೀತಮ್ಮ ಒಳಗಿನಿಂದಲೇ ಕೇಳಿಸಿಕೊಂಡಿದ್ದಳು. ಗಂಡನಿಗೆ ತೇರ್ಗಡೆಯಾಗದಿದ್ದ ಸುದ್ದಿಯೇ ಅವಳನ್ನು

ಸ್ಟಾಕಷ್ಟು ದುಃಖಿಯನ್ನಾಗಿ ಮಾಡಿತ್ತು. ಈಗ ತಂದೆಯ ಕಟುನುಡಿಗಳನ್ನು ಕೇಳಿದ ಮೇಲೆ ಅವಳ ಜೀವ ಹಿಂಡಿಹೋಯಿತು. ತನ್ನ ಒಡಲಿನಲ್ಲಿದ್ದ ಕಂದ ಬರುವ ಹೊತ್ತಿಗೆ ಸಿದ್ಧವಾಗುತ್ತಿದ್ದ ಹಿನ್ನೆಲೆಯನ್ನು ಕಂಡು ಭಯ ಪಟ್ಟಳು. ತನ್ನ ಮೂಕವೇದನೆಯನ್ನು ಯಾರೊಂದಿಗೂ ಹೇಳಿಕೊಳ್ಳಲಾರದೆ ಒಂದೆಡೆ ಕುಳಿತು ಕಣ್ತುಂಬ ಅತ್ತುಬಿಟ್ಟಳು. ಹೆಂಡತಿಯ ಸ್ಥಿತಿಯನ್ನು ರಾಜ ಕಂಡ.

"ಸುಮ್ಮನೆ ಅತ್ತರೆ ಏನು ಪ್ರಯೋಜನ. ಆದ್ದು ಆಗಿಹೋಯಿತು. ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದು ನನ್ನ ಹಣೆಯಲ್ಲಿ ಬರೆದಿಲ್ಲ."

"ಅದಕ್ಕಲ್ಲ."

"ಹಾಗಾದರೆ ಇನ್ನೇತಕ್ಕೆ ?"

"ಮುಂದೆ ಓದು ಬೇಡ ಎಂದು ಮಾವನವರು ಹೇಳಿದರಲ್ಲಾ ಅದಕ್ಕೆ."

"ಬೇಡ ಅಂದರೆ ಬೇಡ. ಕಾಲೇಜಿಗೆ ಮಣ್ಣುಹೊತ್ತು ಒಂದು ಡಿಗ್ರಿ ಹಚ್ಚಿಕೊಳ್ಳುವುದರಲ್ಲಿ ಬರುವ ಪುರುಷಾರ್ಥವೇನು ?"

"ಮುಂದಿನ ಯೋಚನೆ."

"ದೇವರು ಮಾಡಿಸಿದ ಹಾಗಾಗಲಿ. ಏನೂ ಆಗಲಿಲ್ಲಾಂದ್ರೆ ಒಂದು ಕೆಲಸ ಸಿಕ್ಕೇ ಸಿಕ್ಕತ್ತೆ."

"ಮಾವನವರಿಗೆ ಇನ್ನೊಂದು ಸಲ ಹೇಳಿ ನೋಡಬಾರದೇ. ಏನೋ ಕೋಪದಲ್ಲಿ ಆಡಿದರು, ಮತ್ತೆ ಅವರು ಮೊದಲಿನ ಹಾಗೆ ಆಗೇ ಆಗುತ್ತಾರೆ."

"ಅವರು ಮುಂದಕ್ಕೆ ಓದೂಂದರೂ ನನಗೇ ಬೇಡವಾಗಿದೆ, ಸೀತಾ. ಓದಿನಮೇಲೆ ನನ್ನ ಮನಸ್ಸಿದ್ದರೆ ಈ ಸಲ ಪರೀಕ್ಷೆಯಲ್ಲಿ ಪ್ಯಾಸಾಗೇ ಆಗುತ್ತಿತ್ತು."

"ನಿಮಗೆ ನಾಟಕದ ಹುಚ್ಚು ಹಿಡಿದು ಬಿಟ್ಟಿದೆ."

"ನಿಜವಾಗಿ ಹೇಳಿದೆ. ಆ ಹುಚ್ಚಿನ ಮುಂದೆ ಲೋಕವೇ ಶೂನ್ಯವಾಗಿ ಕಾಣುತ್ತದೆ."

"ನೀವು ನಾಟಕ ಸೇರಿಕೊಂಡರೆ ನನ್ನ ಗತಿಯೇನು ?"

“ನಾಟಕದವನ ಹೆಂಡತಿ ಎಂದು ಕರೆಸಿಕೊಳ್ಳುವುದಕ್ಕೆ ನಿನಗೆ ಅವಮಾನವಾಗುತ್ತದೆಯೇ?”

ಸೀತಮ್ಮನ ಕಣ್ಣುಗಳಲ್ಲಿ ನೀರೂರಿತು. ರಾಜ ಹತ್ತಿರ ಸರಿದು ಅವಳ ತಲೆಯನ್ನು ನೇವರಿಸಿ ಸಮಾಧಾನಗೊಳಿಸಿದ.

“ನೀವು ಏನೇ ಆಗಿದ್ದರೂ ನಿಮ್ಮ ಹೆಂಡತಿ ಅನಿಸಿಕೊಳ್ಳುವುದಕ್ಕೆ ನನಗೆ ಅವಮಾನವೇ? ಏಕೆ ಹೀಗೆ ಒಂದೊಂದು ಸಲ ಇರಿಯುವಂತಹ ಮಾತುಗಳನ್ನಾಡುತ್ತೀರಿ.”

“ತಪ್ಪಾಯಿತು. ಕ್ಷಮಿಸು ಸೀತಾ, ನನಗೆ ಬುದ್ಧಿ ಸ್ವಲ್ಪ ಕೆಟ್ಟಿದೆ.”

“ಹೋಗಲಿ ಬಿಡಿ.”

“ಒಂದು ಮಾತು ಸೀತಾ, ಮುಚ್ಚುಮರೆ ಮಾಡದೆ ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಹೇಳಬೇಕು. ಕೇಳಲೇ?”

“ಆಗಲಿ ಕೇಳಿ.”

“ನಾನು ನಾಟಕದವನಾದರೆ ನಿನಗೆ ವ್ಯಥೆಯಾಗುತ್ತದೆಯೇ?”

“ನಾಟಕ ಸೇರುತ್ತೀರಿ ಎಂತ ವ್ಯಥೆಯಿಲ್ಲ. ಆದರೆ............”

“ಆದರೆ........... ಹೇಳು?”

“ನೀವು ನಾಟಕ ಸೇರಿದ ಮೇಲೂ ನಾವು ಹೀಗೇ ಇರುವುದಕ್ಕಾಗುತ್ತದೆಯೇ?”

“ಏಕಾಗಬಾರದು?”

“ಅಲ್ಲಿನ ಜೀವನ ಒಂದು ತರಹ. ಬೇರೆ ಬೇರೆ ಸಹವಾಸ. ಊರೂರು ತಿರುಗಾಡುವುದು—ಉತ್ಸವದ ಮೇಲೆ ಉತ್ಸವ—ಈ ಗೊಂದಲದಲ್ಲಿ ನನ್ನ ಜ್ಞಾಪಕ ಉಳಿಯುತ್ತದೆಯೇ?”

ರಾಜ ಯೋಚಿಸುತ್ತ ಕುಳಿತ.

“ನೀವು ಬೇಕಾದ್ದು ಆದರೂ ನನಗೆ ವ್ಯಥೆಯಿಲ್ಲ, ಅವಮಾನವಿಲ್ಲ. ನೀವು ನನಗಾಗಿ ಸಾವಿರಾರು ರೂಪಾಯಿ ಸಂಪಾದಿಸಿದರೂ ಒಂದೇ, ಸಂಪಾದಿಸದಿದ್ದರೂ ಒಂದೇ. ಆದರೆ ನಾನು ಬಯಸುವುದು ನಿಮ್ಮ ಪ್ರೇಮ. ಅದು ಯಾವಾಗಲೂ ನನ್ನದಾಗಿರಬೇಕು. ಅದರ ಪಾಲು ಕೊಡುವುದಕ್ಕೆ ನಾನು

ಸಿದ್ಧಳಿಲ್ಲ. ನನ್ನ ಬಾಳಿಗೆ ಅದೇ ಎಲ್ಲಾ ಆಗಿದೆ. ಅದು ಒಂದನ್ನು ನಡಸಿಕೊಡು ದೊರೆ, ಅದೊಂದು ಭಿಕ್ಷವನ್ನು ನೀಡು."

"ರಾಜನಿಗೆ ಮಾತು ಹೊರಡದಾಯಿತು. ಗಂಟಲುಬ್ಬಿ ಬಂತು. ಕಣ್ಣುಗಳಲ್ಲಿ ನೀರು ನಿಂತಿತು. ಅವನು ಎದುರಿಸುತ್ತಿದ್ದ ಸಮಸ್ಯೆ ಬಹಳ ಗಂಭೀರವಾಗಿದ್ದಿತ್ತು. ಎರಡು ಪ್ರೇಮ ಜ್ವಾಲೆಗಳ ಮಧ್ಯೆ ಒಂದು ಪತಂಗ ಸಿಕ್ಕಿಕೊಂಡು ತೊಳಲಾಡುತ್ತಿತ್ತು. ಆ ದುಃಖದಲ್ಲಿ ರಾಜ, ಹೆಂಡತಿಯ ಕಣ್ಣೀರನ್ನು ಒರಸಿ ಒಮ್ಮೆ ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ಸೀತಮ್ಮನಿಗೆ ಉತ್ತರ ಸಿಕ್ಕಿತು. ಆದರೆ ರಾಜನ ಸಮಸ್ಯೆ ಬಗೆಹರಿಯಲಿಲ್ಲ.

೧೪

ತನ್ನ ಚಿಂತೆ, ಸಂಶಯ, ಸಮಸ್ಯೆಗಳನ್ನೆಲ್ಲಾ ನಾದಸಮುದ್ರದಲ್ಲಿ ರಾಜ ಮುಳುಗಿಸಿಬಿಟ್ಟ. ಸಂಗೀತವೊಂದು ಬಿಟ್ಟು ಅವನಿಗೆ ಏನೂ ಬೇಕಾಗಿರಲಿಲ್ಲ. ತನ್ನ ಮುಕ್ಕಾಲುಪಾಲು ವೇಳೆಯನ್ನೆಲ್ಲಾ ಗುರುಗಳ ಮನೆಯಲ್ಲಿ ಕಳೆಯುತ್ತಿದ್ದ. ದಿನದಿನಕ್ಕೆ ಅವನ ಹಾಡುಗಾರಿಕೆಯಲ್ಲಿ ಕಂಡು ಬರುತ್ತಿದ್ದ ಪ್ರಗತಿಯನ್ನು ಕಂಡು ಗುರುಗಳು ಬೆರಗಾದರು. ಅವರ ಜತೆಗೂ ರಾಗಾಲಾಪನೆ ಮಾಡುತ್ತಿದ್ದ. ಅವರಿಗೆ ಹೊಳೆಯದಿದ್ದ ಮನೋಧರ್ಮ ಅವನ ಗಾನದಲ್ಲಿ ಕಂಡು ಬರುತಿತ್ತು. ಗುರುಗಳು ಒಂದು ದಿನ "ಇದೇ ರೀತಿ ಇನ್ನು ೩–೪ ವರ್ಷ ನೀನು ಅಭ್ಯಾಸಮಾಡಿದರೆ ನಿನ್ನನ್ನು ಸರಿಗಟ್ಟುವ ಸಂಗೀತ ವಿದ್ವಾಂಸರು ದಕ್ಷಿಣ ಹಿಂದೂಸ್ಥಾನದಲ್ಲಿಯೇ ಯಾರೂ ಇರುವುದಿಲ್ಲ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಶಾರೀರ ಸೌಷ್ಠವವೇ ಸಂಗೀತವೆಂದು ಭಾವಿಸಿದ್ದ ರಾಜನಿಗೆ ಅವನ ಅನುಭವ ಸಂಗೀತದ ಹೊಸ ಸ್ವರೂಪವನ್ನೇ ಕಾಣಿಸಿತು. ತನ್ನ ಮನಸ್ಸಿನ ಭಾವನೆಗಳನ್ನೆಲ್ಲಾ ಸಂಗೀತದ ಮೂಲಕ ಹೇಗೆ ವ್ಯಕ್ತಪಡಿಸಬಹುದೆಂಬುದರ ಕಡೆಗೆ ಅವನ ಲಕ್ಷ್ಯ ಹೋಯಿತು. ಒಂದೊಂದು ಸಲ ತನ್ನ ಹಾಡಿಕೆಯನ್ನು ತಾನೇ ಮೆಚ್ಚಿಕೊಳ್ಳುತ್ತಿದ್ದನು.

ಈ ಉಗ್ರತಪಸ್ಸಿನಲ್ಲಿ ಗೆಳೆಯರನ್ನೂ ಮರೆತುಬಿಟ್ಟಿದ್ದ. ನೀಲನನ್ನು ನೋಡಿ ಎಷ್ಟೋ ದಿವಸಗಳಾಗಿ ಹೋಗಿದ್ದವು. ಒಂದು ದಿನ ತದೇಕ ಚಿತ್ತನಾಗಿ ತಂಬೂರಿಯ ಶ್ರುತಿಯೊಂದಿಗೆ ತನ್ನ ಜೀವಶ್ರುತಿಯನ್ನು ಮೇಳವಾಡಿ

ಹಾಡುತ್ತ ಕುಳಿತಿದ್ದಾನೆ. ರಾಗ ಕಲ್ಯಾಣಿಯಿಂದ ತಾನೇ ತಾನಾಗಿ ಶ್ರೀರಂಜಿನಿಯ ಕಡೆಗೆ ಹರಿಯಿತು. ರಾಗ ರೂಪಹೊತ್ತು ಬಂದು ಎದುರಿಗೆ ನಿಂತಂತೆ ಭಾಸವಾಯಿತು. ರಾಗ ರಾಗಿಣಿಗಳಿಗೆ ಅಭಿಮಾನ ದೇವತೆಗಳಿದ್ದಾರೆ. ಹಾಡುವ ಕಾಲದಲ್ಲಿ ಗಾಯಕನನ್ನು ಅವರು ಆಶ್ರಯಿಸುತ್ತಾರೆ ಎಂಬ ವಾದವನ್ನು ಕೇಳಿದ್ದ. ಆದರೆ ಅವನ ಕುಶಾಗ್ರಮತಿಗೆ ಈ ಬಗೆಯ ಪೌರಾಣಿಕ ಕಲ್ಪನೆ ಸತ್ಯವೆಂದು ತೋರಿರಲಿಲ್ಲ. ಆದರಿಂದು ಹೊಸ ಅನುಭವ. ಶ್ರೀರಂಜಿನಿ ಬಂದು ಎದುರಿಗೆ ನಿಂತಂತಿತ್ತು. ದಿವ್ಯ ಸುಂದರಿ. ರೂಪ ಯೌವನಗಳ ವಸಂತ ಲಕ್ಷ್ಮಿ. ಪ್ರಕೃತಿ, ಪುರುಷರು ಕೂಡಿದಂತೆ ರಾಗಾಭಿಮಾನ ದೇವತೆ, ರಸಋಷಿ ಕೂಡಿದ್ದಾರೆ. ನಾದದ ಹೊನಲು ಪರಿಶುದ್ಧ ಗಂಗಾ ಪ್ರವಾಹದಂತೆ ಹೊರಟಿದೆ. ರಾಜ ತನ್ನ ಅಭಿಮಾನ ದೇವತೆಯನ್ನು ಕಣ್ತೆರೆದು, ದಿಟ್ಟಿಸಿ ನೋಡುತ್ತಾನೆ. ಹೊಸ ಮುಖವಲ್ಲ, ಚಿರಪರಿಚಿತ ಪಳಕೆಯ ಮುಖ. ತಾನು ಕಂಡುಂಡಿದ್ದ ಚಲುವಿಕೆಯ ರಸವರ್ಷ. ಕಣ್ಣು ಮೋಸಮಾಡುತ್ತಿರುವುದೆಂದು ಕಣ್ಣುಜ್ಜಿ ನೋಡುತ್ತಾನೆ. ಅದೇ ಮುಖ, ಬೆಳ್ದಿಂಗಳು ಬಿತ್ತರಿಸಿದಂತಿದ್ದ ಅದೇ ಶುಭ್ರ ಸ್ವೇತ ರದನಪಂಕ್ತಿ. ಅದೇ ಮುಂಗುರುಳು, ಅದೇ ಹಾಲುಕೆನೆಯಂತಹ ಕೆನ್ನೆ, ಅದೇ ಸೆಳೆಮಿಂಚಿನಂತಹ ಕಣ್ನೋಟ! ಯಾರಿವಳು? — ತಟ್ಟನೆ ಸ್ಮೃತಿ ಹೊಳೆಯಿತು............ನೀಲಾ............ನೀಲಾ............!! ನೀಲನೇ ಶ್ರೀರಂಜನಿಯೇ!!! ರಾಜ ಚಕಿತನಾದ. ತಿಳಿವಿನ ಹೊಳಪು ಅವನ ಚೇತನವನ್ನುಡುಗಿಸಿತು. ಮುಂದೆ ಹಾಡು ಸಾಗಲಿಲ್ಲ. ತಂಬೂರಿಯನ್ನು ಒತ್ತಟ್ಟಿಗಿಟ್ಟು ನೀಲನ ಮನೆಯ ಕಡೆಗೆ ಓಡಿದ.

ಬಾಗಿಲು ಸೇರುವ ಹೊತ್ತಿಗೆ ಒಳಗಿನಿಂದ ಮಧುರವಾದ ಗಾನ ಕೇಳಿ ಬರುತ್ತಿತ್ತು. ನಿಂತು ಆಲಿಸಿದ. ತಂಬೂರಿಯ ಶೃತಿಯನ್ನು ಅಪಕ್ವವೆನಿಸುವ ಶೃತಿ ಧೋರಣೆ. ತಂತೀವಾದ್ಯದ ಎಳಸನ್ನು, ನಯವನ್ನು, ಲಾಲಿತ್ಯವನ್ನು ಅಲ್ಲೆಗಳೆಯುವಂತಹ ಸುಕೋಮಲತೆ............ಮತ್ತೆ ಅದೇ ರಾಗ............ಶ್ರೀರಂಜಿನಿ. ಅದೇ ವರೇಖುಗಳು, ಅದೇ ಮೂರ್ಛನ ಕಂಪನಗಳು, ಅದೇ ವಿಸ್ತಾರ, ಅದೇ ಜೀವಸ್ವರಾನುಸಂಧಾನ. ತಾನೇ ಹಾಡಿದಂತಿತ್ತು. ನೀಲಾ, ತಾನೂ ಇಬ್ಬರೂ ಒಬ್ಬರೇ ಗುರುಗಳ ಶಿಷ್ಯರು ನಿಜ. ಆದರೆ ಈ ತಾದಾತ್ಮ್ಯ ಬೆರಗುಗೊಳಿಸುತ್ತಿತ್ತು.

ರಾಜನನ್ನು ಕಂಡು ನೀಲಾ ಹಾಡುವುದನ್ನು ನಿಲ್ಲಿಸುವುದರಲ್ಲಿದ್ದಳು.

"ಏಳಬೇಡ—ಹಾಡು" ಎಂದ. ಹಾಡಿಕೆ ಮುಂದೆ ಸಾಗಿತು. ತಾನೂ ಜತೆಗೆ ದನಿಗೊಟ್ಟ. ಹಾಡುತ್ತ ಹಾಡುತ್ತ ಇಬ್ಬರ ಕಣ್ಣಲ್ಲಿಯೂ ನೀರು. ಎರಡನೆಯ ಕಾಲ ಮುಗಿಯಿತು. ಮೂರನೆಯ ಕಾಲದ ಒಂದು ಆವರ್ತ ಹಾಡಿದ್ದಾಯಿತು. ಮುಂದೆ ಹಾಡಿಕೆ ಸಾಗದು. ಗಂಟಲು ಬಿಗಿದು ಬಂತು.

"ಸಾಕು—ಸಾಕು ನೀಲಾ" ಎಂದು ಅವಳ ತೊಡೆಯ ಮೇಲೆ ಮುಖ ವಿಟ್ಟು ಎಳೆಯ ಮಕ್ಕಳಂತೆ ಅತ್ತುಬಿಟ್ಟ. ತಂಬೂರಿಯ ಮೇಲಿದ್ದ ನೀಲನ ಕೈ ಹಾಗೇ ನಿಂತು ಹೋಯಿತು. ಗೋಡೆಗೆ ತಲೆಯಾನಿಸಿ ಕುಳಿತುಬಿಟ್ಟಳು. ಸ್ವಲ್ಪ ಹೊತ್ತು ಕಣ್ಣುಗಳಿಂದ ನೀರು ಜಾರಿರಬಹುದು. ಕಣ್ಣೀರು ನಿಂತು ಹೋಯಿತು. ಮಾತೂ ಇಲ್ಲ.

ಹೀಗೆ ಎಷ್ಟು ಹೊತ್ತು ಕಳೆಯಿತೋ ಇಬ್ಬರಿಗೂ ತಿಳಿಯದು. ಯಾವಾಗಲೋ ನೀಲನ ಕೈ ರಾಜನ ತಲೆಯನ್ನು ನೇವರಿಸಲು ಬಂದಿತ್ತು. ಅದು ಅಲ್ಲಿ ಹಾಗೆಯೇ ನಿಂತಿತ್ತು.

ಯಾರೋ ಬಾಗಿಲು ತಟ್ಟಿದಂತಾಯಿತು. ಮರುಕ್ಷಣವೇ ಯಾರೋ ಬಾಗಿಲು ನೂಕಿಕೊಂಡು ಒಳಗೆ ಬಂದರು.

"ನೀಲಾ!" ಎಂದು ಕೂಗಿದಂತಾಯಿತು. ಚಕಿತಳಾಗಿ ಎದ್ದು ನಿಂತಳು. ರಾಜನೂ ಎದ್ದು ನಿಂತ. ಬಂದಿದ್ದವರನ್ನು ನೋಡಿ ನೀಲಾ ಚಿಟ್ಟನೆ ಚೀರಿದಳು. ರಾಜ ಬಂದಿದ್ದವರನ್ನು ನೋಡಿದ— ಅವನ ಮುಖ ವಿವರ್ಣವಾಯಿತು, ಗಂಟಲೊಣಗಿತು. ಬಂದಿದ್ದವರೂ ರಾಜನನ್ನು ಕಂಡು ಚಕಿತರಾದರು

"ರಾಜಾ!"

"ತಂದೆ!"

ನರಸಿಂಹಾಚಾರ್ಯರು ಒಳಗೆ ಬಂದರು. ಕೈಯಲ್ಲಿದ್ದ ಸೀರೆಯ ಗಂಟನ್ನು ನೀಲನ ಮುಂದೆ ಎಸೆದು ರಾಜನನ್ನೊಮ್ಮೆ ದುರುಗುಟ್ಟಿಕೊಂಡು ನೋಡಿದರು. ನೀಲಾ ಮುಖವನ್ನು ಮುಚ್ಚಿಕೊಂಡಳು. ಆಚಾರ್ಯರು

ಸಿಂಹಾವಲೋಕನ ಮಾಡಿದರು. ನೆಲದ ಮೇಲೆ ಮಲಗಿದ್ದ ತಂಬೂರಿಯನ್ನು ಕಂಡು ಅವರ ಕೋಪ ಮತ್ತಷ್ಟು ಕೆರಳಿತು.

"ಪಾಪಿಷ್ಠೆ. ಸಂಗೀತ ಒಂದು ಕೇಡು ನಿನಗೆ" ಎಂದು ರಭಸದಿಂದ ತಂಬೂರಿಯನ್ನೊದ್ದರು. ಅದು ಮೂಲೆಗೆ ಬಿದ್ದು ಒಡೆದು ಚೂರು ಚೂರಾಯಿತು. ಅಲ್ಲಿ ನಿಲ್ಲಲಾರದೆ ರಾಜ ಹೊರಟು ಹೋದ. ಕೋಪದಿಂದ ನೀಲನ ತಲೆಗೂದಲನ್ನು ಹಿಡಿದು "ಪಾಪಿ — ಅವನು — ನಿನ್ನ ರಮಣ ಯಾರು ಗೊತ್ತೋ............ನನ್ನ ಮಗ — ಮಗ" ಎಂದರು. ನೀಲಾ "ಅಯ್ಯೋ!" ಎಂದಳು.

"ಹಬ್ಬಕ್ಕೇಂತ ಸೀರೆ ತಂದೆ. ಅದನ್ನು ನೀನು ಉಟ್ಟದ್ದು ನೋಡಿ ಸಂತೋಷ ಪಡಬೇಕೆಂದಿದ್ದೆ. ಸಂತೋಷ ಪಟ್ಟದ್ದಾಯಿತು. ಕುಲಟೆ, ತಂದೆ — ಮಗ ಇಬ್ಬರೂ............"

"ಇಲ್ಲ............ಇಲ್ಲ" ಎಂದಳು.

ಆಚಾರ್ಯರು ಅವಳ ಕಪಾಳಗಳಿಗೆ ಬಿಗಿದರು. ಎಲ್ಲವನ್ನೂ ಸಹಿಸಿ ಕೊಂಡು, ನಮ್ರತೆಯಿಂದ "ನಿಮ್ಮದು ತಪ್ಪು ತಿಳಿವಳಿಕೆ. ಅವರೂ ನಮ್ಮ ಗುರುಗಳ ಹತ್ತಿರ ಪಾಠಕ್ಕೆ ಬರುತ್ತಾರೆ."

"ಇಲ್ಲೇಕೆ ಬಂದ ಹಾಗಾದರೆ?"

"ಜತೆಯಲ್ಲಿ ಅಭ್ಯಾಸ ಮಾಡುತ್ತೇವೆ."

"ಯಾವ ಅಭ್ಯಾಸ — ದುರಭ್ಯಾಸ, ಸುಳ್ಳು............ಸುಳ್ಳಿನ ಕಂತೆ"

"ಸುಳ್ಳಲ್ಲ. ನನ್ನ ಮಾತನ್ನು ನಂಬಿ. ನಿಮಗೆ ನಾನು ಮೋಸ ಮಾಡಿಲ್ಲ. ಅವರು ನನ್ನ ಗುರು ಸಮಾನ. ನಿಮ್ಮ ಮಗ ಎಂದು ನನಗೇನು ಗೊತ್ತು."

"ಭಡವಾ — ನನ್ನ ಕೊಂದು ಬಿಟ್ಟ" ಎಂದು ಆಚಾರ್ಯರು ಕುಳಿತು ಬಿಟ್ಟರು. ಕೋಪ ತಣ್ಣಗಾಗಿತ್ತು. ಕಣ್ಣುಗಳಿಂದ ಧಾರೆಧಾರೆಯಾಗಿ ನೀರು ಹರಿಯಿತು.

"ತಾಯಿಲ್ಲದ ಮಗ ಎಂದು ಕಣ್ಣಲ್ಲಿಟ್ಟುಕೊಂಡು ಸಾಕಿದೆ. ಬೇರೆ ಮದುವೆ ಮಾಡಿಕೊಂಡರೆ ಅವನಿಗೆಲ್ಲಿ ಹಿಂಸೆಯಾಗುವುದೋ ಎಂದು ಆ ಯೋಚನೆಯನ್ನೂ ಬಿಟ್ಟು ಬಿಟ್ಟೆ. ನಿನ್ನ ಸಹವಾಸವಾಯಿತು — ನಿನ್ನ ನಂಬಿದೆ. ನನ್ನ ಶಕ್ತಿ ಮೀರಿ ನಿನ್ನ ಖರ್ಚುವೆಚ್ಚಗಳನ್ನು ನೋಡಿಕೊಂಡೆ— ನಿನ್ನ ಬಾಯಲ್ಲಿ ಬಂದದ್ದು ವೇದವಾಕ್ಯ ಎಂದುಕೊಂಡು ಪರಿಪಾಲಿಸಿದೆ. ಅವನು ಹಾಗಾದ — ನೀನು.... ನೀನು ಹೀಗಾದೆ."

"ಇಲ್ಲದ್ದನ್ನು ಏಕೆ ಹೀಗೆ ಮನಸ್ಸಿಗೆ ತಂದುಕೊಳ್ಳುವಿರಿ. ಅವರಾಗಲಿ ನಾನಾಗಲಿ ನೀತಿ, ಧರ್ಮವನ್ನು ಬಿಟ್ಟು ಹೋಗಿಲ್ಲ."

"ಹಾಳಾಗಿ ಹೋಗಿ............ಇನ್ನು ನನಗೇನಾದರೇನು ?" ಎಂದು ಹೊರಟು ನಿಂತರು. ನೀಲಾ ಕೈ ಹಿಡಿಯ ಹೋದಳು. ಅವಳ ಕೈಯನ್ನು ಝಾಡಿಸಿ ಹೊರಟು ಹೋದರು.

ನೀಲಾ ತನ್ನನ್ನು ತಾನು ಎದುರಿಸಲಾರದಾದಳು. ಅಸಹ್ಯದಿಂದ ಮುಖ ಮುಚ್ಚಿಕೊಂಡಳು. ತನ್ನ ಮುಖ ತನಗೇ ಬೇಸರವಾಯಿತು. ತಾನು ನಟಿಸಿದ ನಾಟಕ, ಆಚರಿಸಿದ ಕಪಟಗಳನ್ನು ಕಂಡು ಜಿಗುಪ್ಸೆಗೊಂಡಳು. "ಪ್ರೇಮವನ್ನು ನಿರಾಕರಿಸಿದೆ — ಅನ್ನದಾತನಿಗೆ ಎರಡು ಬಗೆದೆ — ಎಲ್ಲಕ್ಕೂ ಕಳಸವಿಟ್ಟಂತೆ ತಂದೆ — ಮಕ್ಕಳ............" ಅವಳ ಮನಸ್ಸು ಏನೇನನ್ನೋ ಯೋಚಿಸಿತು. ಬಾಳು ಬೇಸರವಾಯಿತು. "ನಾಳೆ ಸಮಾಧಾನಗೊಂಡು ಆಚಾರ್ಯರು ಮತ್ತೆ ಬರಬಹುದು. ಅವರಿಗೆ ಮುಖ ಹೇಗೆ ತೋರಿಸಲಿ. ಇನ್ನೆಷ್ಟು ದಿವಸ ಪಾಪ ಜೀವನದ ಈ ಸುಳ್ಳು ಬಾಳುವೆಯನ್ನು ಬಾಳಲಿ." "ನನ್ನ ದೊರೆ ಮತ್ತೆ ಬರುವುದಿಲ್ಲ — ಇದೇ ಕೊನೆ — ಇಂದೇ ಕೊನೆಯ ದಿನ. ಮತ್ತೆ ಅವರು ನನ್ನನ್ನು ಮುಖವೆತ್ತಿ ನೋಡುವುದಿಲ್ಲ. ನನ್ನ ಬಾಳಿನ ಪುಣ್ಯರಾಶಿ ಇಂದು ಹೊರಟು ಹೋಯಿತು. ನನ್ನ ಮನೆಯನ್ನು — ಆತ್ಮವನ್ನು ಸರಸ್ವತಿ ನಿರಾಕರಿಸಿ ಹೊರಟು ಹೋದಳು" ಎಂದು ದುಃಖಿಸುತ್ತ 'ಅಯ್ಯೋ' ಎಂದು ಚೀರಿದಳು. ಸ್ಮೃತಿ ತಪ್ಪಿ ಹೋಯಿತು.

ಎಲ್ಲಿಗೆ ಹೋಗಬೇಕೆಂದು ತಿಳಿಯದೆ ರಾಜ ಹೋಗುತ್ತಿದ್ದ. ಅವನ ಬುದ್ಧಿಗೆ ಮಂಕು ಕವಿದುಬಿಟ್ಟಿತು. ಎಲ್ಲಿ ನೋಡಿದರೂ ಕತ್ತಲೆ. ಕತ್ತಲೆಯ

ಮಬ್ಬಿನಲ್ಲಿ ದಾರಿಯನ್ನು ತಡಕುತ್ತಾ ಹೋಗುತ್ತಿದ್ದಂತಾಗಿತ್ತು ಅವನ ಪಾಡು. ನಡೆಯಲು ಶಕ್ತಿಯಿಲ್ಲದೆ ಹೋಯಿತು. ಒಂದೆಡೆ ತಲೆಯ ಮೇಲೆ ಕೈಹೊತ್ತು ಕುಳಿತುಬಿಟ್ಟ. ನಡೆದಿದ್ದ ಆಕಸ್ಮಿಕ ಘಟನೆ ಮತ್ತೆ ಮತ್ತೆ ಅವನ ಮನೋ ರಾಜ್ಯದಲ್ಲಿ ಆದಂತೆ ತೋರುತ್ತಿತ್ತು. ಮರೆಯಬೇಕೆಂದು ಎಷ್ಟು ಪ್ರಯತ್ನಿಸಿ ದರೂ ಸಾಧ್ಯವಾಗುತ್ತಿರಲಿಲ್ಲ. ಮನಸ್ಸು ಅಪಾರ ವೇದನೆಗೆ ಸಿಕ್ಕಿ ಉಚ್ಚಾ ರಣೆಯ ಶಕ್ತಿಯನ್ನು ನೀಗಿಕೊಂಡಿತ್ತು. ತನ್ನಿಂದ ನಡೆದಿದ್ದ ಅಪಕೃತ್ಯವನ್ನು ನೆನೆದ. "ಇನ್ನು ಈ ಜೀವ ಹೊತ್ತು ಸುಖವಿಲ್ಲ. ಈ ಮಹಾಪರಾಧಕ್ಕೆ ಪ್ರಾಣತ್ಯಾಗವೇ ತಕ್ಕ ಶಿಕ್ಷೆ" ಎಂದು ಯೋಚಿಸಿದ. ಆದರೆ ತನ್ನ ತಪ್ಪಿಗೆ ನಿರಪರಾಧಿನಿಯಾದ ಸೀತಮ್ಮನಿಗೆ ಶಿಕ್ಷೆಯೇ? ತಾನು ಸಾವನ್ನು ವೀರನಂತೆ ಅಪ್ಪಬಹುದು. ಆದರೆ ಅದರ ಘೋರ ಪರಿಣಾಮವನ್ನು ಅನುಭವಿಸುವವರು ಯಾರು? ಇದು ಶಿಕ್ಷೆಯ ದಾರಿಯಲ್ಲ. ಪರಾಜಯವನ್ನೊಪ್ಪಿಕೊಂಡು ಪಲಾಯನ ಹೊಂದುವ ಹಾದಿ" ಎಂದು ಅದನ್ನು ಮನಸ್ಸಿನಿಂದ ತೊಡೆದು ಹಾಕಿದನು.

ಮುಂದೇನು ಮಾಡುವುದು? ತಂದೆಗೆ ಮತ್ತೆ ಮುಖ ತೋರಿಸುವುದು ಹೇಗೆ. ಅವರು ಉದಾರಮನಸ್ಸಿನಿಂದ ಕ್ಷಮಿಸಬಹುದು. ಅದನ್ನು ನೆನೆದು ಅವನ ಮೈ ನಡುಗಿತು. ತಂದೆಯ ಉಗ್ರ ಕೋಪವನ್ನು ಸಹಿಸಿಕೊಳ್ಳ ಬಹುದು. ಅವರು ಕೊಡುವ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸ ಬಹುದು. ಆದರೆ ಕ್ಷಮೆಯನ್ನು ಸಹಿಸುವುದು ಹೇಗೆ?

ಬುದ್ಧಿಗೆ ಕವಿದಿದ್ದ ಮಂಕು ಜಾರುತ್ತ ಬಂದಿತು. ಕ್ಷಮೆಗೆ ಅವಕಾಶ ವನ್ನೇ ಕೊಡಬಾರದು. ಮತ್ತೆ ತಂದೆಗೆ ಈ ಹಾಳು ಮುಖವನ್ನು ಎಂದಿಗೂ ತೋರಿಸಬಾರದು ಎಂದು ನಿರ್ಧರಿಸಿ ಒಂದು ಗಾಡಿಯನ್ನು ಗೊತ್ತುಮಾಡಿ ಕೊಂಡು ಮನೆಯ ಕಡೆಗೆ ಹೊರಟ.

ಗಾಡಿಯಲ್ಲಿ ಕುಳಿತಿದ್ದಾನೆ. ಏನು ಏನೋ ಚಿಂತೆಗಳು. ತನ್ನಲ್ಲಿ ತಂದೆ ಇಟ್ಟಿದ್ದ ಪ್ರೇಮ. ಅವರು ತನ್ನನ್ನು ಪಾಲಿಸಿ ಪೋಷಿಸಿದ ಬಗೆ. ಅವರ ಮಗುವಿನಂತಹ ಅಂತಃಕರಣ. ತಾಯಿಯಿಲ್ಲವೆನ್ನಿಸದಂತೆ ಅವರು ತನ್ನ ಪ್ರತಿಯೊಂದು ಆಸೆ ಆಶಯಗಳನ್ನೂ ತೃಪ್ತಿಗೊಳಿಸುತ್ತಿದ್ದುದು ಎಲ್ಲವನ್ನೂ ನೆನೆದು ಅತ್ತುಬಿಟ್ಟ. ಅಂತಹ ತಂದೆಯನ್ನು ಬಿಟ್ಟುಹೋಗಬೇಕು. ಹತ್ತಿರ

ವಿರಲಿ, ದೂರವಿರಲಿ ಮತ್ತೆ ಮುಖವನ್ನು ನೋಡುವ ಹಾಗಿಲ್ಲ; ಒಂದು ಮಾತು ಆಡುವ ಹಾಗಿಲ್ಲ; ತನ್ನ ಮಹಾಪರಾಧಕ್ಕೆ ಒಮ್ಮೆ ಕ್ಷಮೆ ಕೇಳು ವಂತೆಯೂ ಇಲ್ಲ!!

ಗಾಡಿ ಮನೆಯ ಮುಂದೆ ಬಂದು ನಿಂತಿತು. ಬೇಗ ಇಳಿದು ಒಳಗೆ ಹೋದ. ಅವನು ಬಂದ ಸ್ಥಿತಿಯನ್ನು ನೋಡಿ ಸೀತಮ್ಮ ಬೆರಗಾದಳು.

"ಸೀತಾ........"

ಸೀತಮ್ಮ ಎದುರಿಗೆ ಬಂದು ನಿಂತಳು.

"ಅಪ್ಪಾ ಬಂದಿದ್ದಾರೆಯೋ?"

"ಇನ್ನೂ ಇಲ್ಲ."

"ಬೇಗ ಗಂಟುಮೂಟೆ ಕಟ್ಟು. ಕೈಗೆ ಸಿಕ್ಕಿದ ನಾಲ್ಕು ಬಟ್ಟೆಗಳನ್ನು ಹಾಕಿಕೊಂಡು ಹೊರಡುವುದಕ್ಕೆ ಸಿದ್ಧಳಾಗು. ಗಾಡಿ ಬಂದು ನಿಂತಿದೆ."

"ಎಲ್ಲಿಗೆ?"

"ಎಲ್ಲಿಗೆ, ಏನು, ಎಂತು ಎಂದು ಪ್ರಶ್ನೆ ಕೇಳಬೇಡ. ಹೇಳಿದಷ್ಟು ಮಾಡು."

"ಆದರೆ........"

"ಆದರೆಗೀದರೆ ಮಾತಿಲ್ಲ. ಬರುತ್ತೀಯೋ ಇಲ್ಲವೋ?"

"ಹಿಂದಿರುಗಿ ಬರುವುದು."

"ಹೇಳಿದೆನಲ್ಲಾ ಯಾವದನ್ನೂ ಈಗ ಕೇಳಬೇಡ."

ನಿರುಪಾಯಳಾಗಿ ಸೀತಮ್ಮ ಹೇಳಿದಂತೆ ಮಾಡಿದಳು. ರಾಜ ಹೋಗಿ ಜೀವಕ್ಕನ ಕಾಲುಮುಟ್ಟಿ ನಮಸ್ಕರಿಸಿದನು. ಇದು ಒಂದೂ ಅವಳಿಗೆ ಅರ್ಥ ವಾಗಲೊಲ್ಲದು. ಹಾಸಿಗೆ ಟ್ರಂಕು ಸಿದ್ಧವಾಗಿತ್ತು. ಅದನ್ನು ಕಂಡು ಜೀವಕ್ಕ ಭಯಗೊಂಡಳು.

"ಇದೇನು ರಾಜಾ—ಎಲ್ಲಿಗೆ ಈ ಪ್ರಯಾಣ?"

"ಹೋಗಬೇಕಾಗಿದೆ ಅತ್ತೆ."

"ಅಣ್ಣನಿಗೆ ಹೇಳದೆ...."

"ಹೇಳುವುದಕ್ಕೆ ಸಾಧ್ಯವಿಲ್ಲ. ನೀನು ಹೇಳಿಬಿಡು."

"ಇದೇನು ಮಾತೋ ರಾಜಾ. ತುಂಬಿದ ಶುಕ್ರವಾರ. ಚೊಚ್ಚಿಲು ಗರ್ಭಿಣಿ—ಹೀಗೆ ಹೋಗಬಾರದಪ್ಪಾ. ಏನು ಮಾತು ಬಂತು. ನನ್ನ ಹತ್ತಿರ ಹೇಳಬಾರದೇ ?"

"ಯಾವದನ್ನೂ ಕೇಳಬೇಡ ಅತ್ತೆ. ಪುಣ್ಯವಿದ್ದರೆ ಒಂದು ದಿವಸ ಮತ್ತೆ ಸೇರೋಣ."

"ಇದೇನೇ ಸೀತಾ. ಹೀಗೆ ನಿಂತುಬಿಟ್ಟೆ. ನೀನಾದರೂ ರಾಜನಿಗೆ ಹೇಳೇ."

"ನಾನು ಏನು ಹೇಳಲಮ್ಮಾ........"

ಅವಳು ಮಾತು ಮುಗಿಸುವುದಕ್ಕೆ ಅವಕಾಶಕೊಡದೆ ಎಳೆದುಕೊಂಡು ಹೊರಗೆ ಹೋದ. ಗಾಡಿಯವನು ಸಾಮಾನುಗಳನ್ನು ತಂದು ಗಾಡಿಯಲ್ಲಿ ಹಾಕಿದ. ಜೀವಕ್ಕ "ತಡೆಯೋ, ಹೋಗಬೇಡವೋ—ರಾಜಾ—ರಾಜಣ್ಣಾ" ಎಂದು ಕೂಗಿಕೊಂಡು ಹಿಂದೆ ಬಂದರು. ಗಾಡಿ ವೇಗವಾಗಿ ಹೊರಟೇ ಬಿಟ್ಟಿತು.

ಜೀವಕ್ಕ ಗೊಳೋ ಎಂದು ಅಳುತ್ತ ಕುಳಿತಳು. ಸ್ವಲ್ಪ ಹೊತ್ತು ಕಳೆಯಿತು. ನರಸಿಂಹಾಚಾರ್ಯರು ಮನೆಗೆ ಬಂದರು. ಅವರ ಮುಖವೂ ಕುಂಗೆಟ್ಟಿತ್ತು. ಅಣ್ಣನನ್ನು ನೋಡಿದ ಕೂಡಲೆ ಜೀವಕ್ಕ ನಡೆದುದನ್ನು ವಿವರಿಸಿ ಅಳುವಿನ ಮಧ್ಯೆ ಹೇಳಿದಳು. ಆಚಾರ್ಯರು ಎಲ್ಲವನ್ನೂ ಕೇಳಿ ಸುಮ್ಮನೆ ಕುಳಿತರು.

"ಇದೆಲ್ಲಾ ಏನಪ್ಪಾ ನರಸಿಂಹ ?"

ಆಚಾರ್ಯರು ಉತ್ತರಕೊಡಲಿಲ್ಲ.

"ಹೋಗಿ ಹುಡುಕಿ ಅವನನ್ನು ಕರೆದುಕೊಂಡು ಬರಬಾರದೇ? ಇದೇನು ವಿಪರೀತ—ತುಂಬಿದ ಬಸುರಿ ಹುಡುಗಿ. ಅವಳನ್ನು ಹೀಗೆ ಹೇಳದೆ ಕೇಳದೆ ಕರೆದುಕೊಂಡು ಎಲ್ಲಿಗೆ ಹೋದನೋ ಗೊತ್ತಾಗಲಿಲ್ಲ. ಏನಾಯಿತು ನರಸಿಂಹ– ಏನಾದರೂ ಆಗಿರಲಿ ಹೋಗಿ ಹುಡುಕಿ ಕರೆದುಕೊಂಡು ಬಾಪ್ಪ."

"ಅದೊಂದು ಮಾತು ಹೇಳಬೇಡಕ್ಕ."

"ನಿನ್ನ ಬುದ್ಧಿಗೇನು ಮಂಕು ಕವಿತೋ ನರಸಿಂಹಾ.... ಹೊಟ್ಟೇಲಿ ಹುಟ್ಟಿದ ಮಗ ಅಲ್ಲವೇನೋ !"

"ಅವನು ಮಗನೂ ಅಲ್ಲ, ನಾನು ತಂದೆಯೂ ಅಲ್ಲ. ನನ್ನ ಮಗ ನನ್ನ ಭಾಗಕ್ಕೆ ಎಂದೋ ಸತ್ತುಹೋದ" ಎಂದು ಬಿರುಸಾಗಿ ನುಡಿದು ಅಲ್ಲಿಂದ ಎದ್ದು ಹೊರಟುಹೋದರು.

೧೫

'ಲಕ್ಷ್ಮಿವಿಲಾಸ ಹೋಟಲಿ'ನಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಸಾಮಾನನ್ನು ಅಲ್ಲಿ ಇಳಿಸಿದ. ಅಂದಿನ ಘಟನೆಗಳು, ಈ ಉದ್ವೇಗ ಸೀತಮ್ಮನಿಗೆ ತುಂಬ ಆಯಾಸವನ್ನುಂಟುಮಾಡಿತ್ತು. ಹೊಟ್ಟೆಯಲ್ಲಿ ನೋವು ಕಾಣಿಸಿಕೊಂಡಿತು. ಅವಳು ಮಲಗಲು ಹಾಸಿಗೆ ಹಾಸಿಕೊಟ್ಟ.

"ಸೀತಾ, ಡಾಕ್ಟರನ್ನು ಕರೆದುಕೊಂಡು ಬರಲೇ?"

"ಏನೂ ಬೇಡಿ. ಸ್ವಲ್ಪ ಹೊತ್ತಾದರೆ ಹೋಗುತ್ತದೆ."

ಹೆಂಡತಿಯ ಸ್ಥಿತಿ ಮತ್ತಷ್ಟು ಚಿಂತೆಗೆ ಕಾರಣವಾಯಿತು. ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಯಾವ ರೂಪದಲ್ಲಿ ಬರಬಹುದೆಂದು ಯೋಚಿಸಿದ. ಅವನ ಹೃದಯದಿಂದ ದಾರುಣವೇದನೆಯಿಂದ ಕೂಡಿದ ಪ್ರಾರ್ಥನೆಯೊಂದು ಹೊರಟಿತು. "ದೇವರೇ, ಏನೇ ಆದರೂ, ಸೀತನ ಪ್ರಾಣ ಒಂದು ಉಳಿಸು."

ಎರಡು ದಿವಸಗಳ ಪೂರ್ಣ ವಿಶ್ರಾಂತಿ ಸೀತಮ್ಮನಿಗೆ ತುಂಬ ಗುಣ ವನ್ನುಂಟುಮಾಡಿತು. ಅವಳು ಬೇಡಬೇಡವೆಂದರೂ ಕೇಳದೆ ಡಾಕ್ಟರನ್ನು ಕೇಳಿ ಔಷಧವನ್ನು ತಂದು ಹುಯ್ದಿದ್ದ. ಅವಳು ಎದ್ದು ಓಡಿಯಾಡುವಂತಾ ಗಲು ರಾಜ ಬಾಡಿಗೆಗೆ ಮನೆ ಹುಡುಕಲಾರಂಭಿಸಿದ.

ಒಂದು ದಿನ ಸೀತಮ್ಮ ಕೇಳಿದಳು. "ಏನಾಯಿತೂಂದ್ರೆ ಹೇಳಿ?"

"ಆ ಮಾತು ಕೇಳಬೇಡ ಸೀತಾ."

"ನಿಮಗೂ ಮಾವನವರಿಗೂ ಏನಾದರೂ ವ್ಯಾಜ್ಯವಾಯಿತೇ?"

"ನೀನು ಎಷ್ಟು ಸಲ ಕೇಳಿದರೂ ಆ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ ಸೀತಾ. ಸುಮ್ಮನೆ ಏತಕ್ಕೆ ಕಂಠಶೋಷಣೆ ಮಾಡಿಕೊಳ್ಳುತ್ತೀ."

"ನನಗೂ ಹೇಳಬಾರದಷ್ಟು ರಹಸ್ಯವೇ?"

"ಹೇಳಬಾರದೆಂದಲ್ಲ. ನಿನಗೆ ಹೇಳಲೇಬೇಕಾಗಿದೆ. ಆದರೆ ಈಗ ಬೇಡ.

ಒಂದಲ್ಲ ಒಂದು ದಿವಸ ನಾನೇ ಹೇಳುತ್ತೇನೆ. ಅಲ್ಲಿಯ ತನಕ ಸ್ವಲ್ಪ ಸಮಾಧಾನ ತಂದುಕೋ. ನನ್ನ ಇದೊಂದು ಪ್ರಾರ್ಥನೆಯನ್ನು ನಡಸಿಕೊಡು."

"ನಿಮ್ಮ ಇಷ್ಟ."

ರಾಜನ ಪ್ರಯತ್ನ ಫಲಿಸಿತು. ಒಂದು ಮನೆ ಸಿಕ್ಕಿತು. ಚಿಕ್ಕದಾಗಿದ್ದರೂ ಚೊಕ್ಕದಾಗಿತ್ತು. ದೀಪ, ನಳ ಎಲ್ಲಾ ಇತ್ತು. ಬಾಡಿಗೆಯೂ ಹೆಚ್ಚಾಗಿರಲಿಲ್ಲ. ಹತ್ತೇ ರೂಪಾಯಿ. ಹೋಟೆಲ್ ಲೆಕ್ಕ ತೀರಿಸಿ ಹೆಂಡತಿಯೊಡನೆ ಮನೆಗೆ ಹೋದ. ಸಂಸಾರ ಮೊದಲಿಂದ ಆರಂಭಿಸಬೇಕಾಗಿತ್ತು. ಪಾತ್ರೆ, ಪದಾರ್ಥ, ಅಡಿಗೆಯ ಸಾಮಾನು ಎಲ್ಲವನ್ನೂ ಹೊಂದಿಸಿಕೊಳ್ಳಬೇಕಾಗಿತ್ತು. ಜತೆಗೆ ಎರಡು ತಿಂಗಳ ಬಾಡಿಗೆ ಮುಂಗಡವಾಗಿ ಕೊಡಬೇಕಾಗಿತ್ತು. ಸೀತಮ್ಮ ಈಗ ಹೇಗೂ ಸೊಂಟದ ಡಾಬನ್ನು (ಉಡ್ಯಾಣ) ಉಪಯೋಗಿಸುತ್ತಿರಲಿಲ್ಲ. ಗಂಡ ಹೆಂಡಿರಿಬ್ಬರೂ ಅಳೆದೂ ಸುರಿದೂ ಯೋಚಿಸಿದರು. ಏನೇ ಆದರೂ ಡಾಬನ್ನು ಮಾರಲೊಲ್ಲೆ ಎಂದು ರಾಜ. ಹೇಗೂ ಉಪಯೋಗಿಸುತ್ತಿಲ್ಲ, ಉಪಯೋಗಿಸುವಂತಾದ ಮೇಲೆ ನೀವೇ ಮಾಡಿಸಿಕೊಟ್ಟರೆ ಆಗುವುದಿಲ್ಲವೇ ಎಂದು ಸಮಾಧಾನ ಹೇಳಿದಳು. ಅದರಿಂದ ಅಂದಿನ ಸಮಸ್ಯೆಯೇನೋ ಪೂರೈಸಿದಂತಾಯಿತು. ಆದರೆ ರಾಜ ಇದು ತನ್ನ ಪ್ರಾಯಶ್ಚಿತ್ತದ ಇನ್ನೊಂದು ಹೆಜ್ಜೆ ಎಂದು ಭಾವಿಸದಿರಲಿಲ್ಲ.

ಸ್ವತಂತ್ರ ಸಂಸಾರವನ್ನು ಆರಂಭಿಸಿ ಎಲ್ಲ ಜವಾಬ್ದಾರಿಯನ್ನು ಹೊತ್ತುಕೊಳ್ಳುವುದಕ್ಕೆ ಸೀತಮ್ಮ ಯೋಚಿಸಲಿಲ್ಲ. ಆದರೆ ಸಂಸಾರ ಹೊಡೆದ ಸಂದರ್ಭ ಅವಳ ಮನಸ್ಸಿಗೆ ತುಂಬ ನೋವನ್ನುಂಟುಮಾಡಿತ್ತು. "ಎಲ್ಲರನ್ನೂ ಕಡಿದುಕೊಂಡಂತೆ ಬಂದಂತಾಯಿತಲ್ಲಾ, ಬರುವುದೇ ಖಂಡಿತವಾಗಿದ್ದರೆ ಮಾವನವರಿಗೂ ಹೇಳಿ ನಸುನಗುತ್ತಾ ಬರಬಹುದಾಗಿತ್ತಲ್ಲಾ" ಎಂದು ಯೋಚಿಸಿದಳು.

ಕಾಲೇಜಿನ ಕದ ತನ್ನ ಭಾಗಕ್ಕೆ ಮುಚ್ಚಿದ ಹಾಗೆ ಎಂಬುದನ್ನು ರಾಜ ನಿಶ್ಚಯಿಸಿಕೊಂಡ. ಕೆಲಸವನ್ನು ಹುಡುಕಿಕೊಂಡ ಹೊರತು ಮುಂದೆ ಜೀವನೋಪಾಯಕ್ಕೆ ಮಾರ್ಗವಿರಲಿಲ್ಲ. ಬುಳ್ಳಪ್ಪನ ಕಂಪೆನಿ ಮೈಸೂರಿನಲ್ಲಿತ್ತು. ಅಲ್ಲಿಗೆ ಯಾವಾಗ ಬೇಕಾದರೂ ಹೋಗಿ ಸೇರಬಹುದಾಗಿತ್ತು. ಆದರೆ ಹೆಂಡತಿಯ ಪರಿಸ್ಥಿತಿಯಲ್ಲಿ ಅವಳನ್ನು ಬಿಟ್ಟು ಹೋಗುವಂತಿರಲಿಲ್ಲ. ಕೈಯ

ಲ್ಲೊಂದು 'ಅಪ್ಲಿಕೇಷನ್ ಫಾರಂ' ಹಿಡಿದು ಕಛೇರಿಯಿಂದ ಕಛೇರಿಗೆ ಅಲೆಯತೊಡಗಿದ. ಎಲ್ಲಾ ನಿಷ್ಪ್ರಯೋಜನವಾಯಿತು. ಸಹಾಯವಿಲ್ಲದೆ, ಶಿಫಾರಸ್ಸಿಲ್ಲದೆ ಕೆಲಸ ದೊರೆಯುವಂತಿರಲಿಲ್ಲ.

ಒಂದು ದಿನ ತನ್ನ ನಿತ್ಯಯಾತ್ರೆಯನ್ನು ಮುಗಿಸಿಕೊಂಡು ರಾಜ ಬರುತ್ತಿರುವಂತೆ ಕಾಲೇಜಿನ ರಸ್ತೆಯಲ್ಲಿ ತಿರುಮಲ, ಸೀತಾರಾಮು ಸಂಧಿಸಿದರು. ಗೆಳೆಯನನ್ನು ನೋಡಿ ಅವರಿಗೆ ಬ್ರಹ್ಮಾನಂದವಾಯಿತು. ರಾಜನಿಗಂತೂ ಮಳಲುಗಾಡಿನಲ್ಲಿ ನೆಳಲು ಸಿಕ್ಕಿದಂತಾಯಿತು.

"ಎಲ್ಲಿಗೆ ಮಾಯವಾಗಿ ಹೋದೆ. ಮನೆಯಲ್ಲಿ ವಿಚಾರಿಸಿದರೆ ಮನೆ ಬಿಟ್ಟನೆಂದು ನಿಮ್ಮ ತಂದೆ ಹೇಳಿದರು." ಎಂದು ಸೀತಾರಾಮು ಕೇಳಿದ.

"ನಿನಗೂ ಯಜಮಾನರಿಗೂ ಏನಾದರೂ ವ್ಯಾಜ್ಯವಾಯಿತೇನು?"

"ಎಲ್ಲಿದ್ದೀ....... ಮನೆ ಎಲ್ಲಿ ಮಾಡಿದ್ದೀ........?"

"ಹೌದು, ಮನೆಬಿಟ್ಟದ್ದು ನಿಜ. ಬೇರೆ ಮನೆಮಾಡಿಕೊಂಡು ಇದ್ದೀನಿ."

"ನಮಗೆ ಯಾರಿಗೂ ಒಂದು ಮಾತು ತಿಳಿಸಬೇಡವೇ?"

"ನಾವೆಲ್ಲ ನಿನ್ನ ಭಾಗಕ್ಕೆ ಸತ್ತುಹೋದೆವೇನು?"

"ಇಲ್ಲಾ ತಿರುಮಲ, ಹೇಳುವುದಕ್ಕೆ ಮನಸ್ಸಾಗಲಿಲ್ಲ."

"ಹೋಗಲಿ. ಈಗ ಮನೆ ಎಲ್ಲಿ ಮಾಡಿದ್ದೀ."

"ಶೇಷಾದ್ರಿಪುರದಲ್ಲಿ. ಒಂದು ಗುಡಿಸಲು."

"ತಂಗಿ ಹೇಗಿದ್ದಾರೆ."

"ಚೆನ್ನಾಗಿದ್ದಾಳೆ."

"ಹೆರಿಗೆ...."

"ಇನ್ನೂ ತಡ."

"ಕಾಲೇಜು ಏನು ಮಾಡಿದೆ."

"ಇನ್ನೆಲ್ಲಿ ಕಾಲೇಜು ಸೀತಾರಾಮು. ಕೆಲಸ ಹುಡುಕುತ್ತಾ ಇದ್ದೇನೆ."

"ಪ್ರಿನ್ಸಿಪಾಲರು ದಿನಾ ಕೇಳುತ್ತಾರೆ. ಬಂದು ಅವರನ್ನು ಒಂದು ಸಲ ನೋಡಬಾರದೇ?"

"ಏನೆಂದು ಬಂದು ನೋಡಲಿ."

"ನೀನು ನೋಡದಿದ್ದರೆ ಅವರು ಬಹಳ ನೊಂದುಕೊಳ್ಳುತ್ತಾರೆ."

" ಆಗಲಿ. ನಾಳೆ ಬರುತ್ತೇನೆ. "

" ಈಗ ಎಲ್ಲಿಗೆ ಹೊರಟೆ. "

" ಮನೆಗೆ. "

" ನಾವೂ ಬರಬಹುದೇ. "

ರಾಜ ಸ್ವಲ್ಪ ಯೋಚಿಸಿ " ಬನ್ನಿ " ಎಂದ.

" ನಿನಗೆ ಬೇಡದಿದ್ದರೆ ಬರುವುದಿಲ್ಲ. "

" ಅದಕ್ಕಲ್ಲ. ನನ್ನ ಮನೆ ಗುರುತು ನೀವು ಯಾರಿಗೂ ಹೇಳಕೂಡದು."

" ಇಲ್ಲ. ಹೇಳುವುದಿಲ್ಲ. "

ರಾಜನ ಮನೆ, ಸಂಸಾರದ ಸ್ಥಿತಿಯನ್ನು ನೋಡಿ ಗೆಳೆಯರಿಬ್ಬರೂ ನೊಂದುಕೊಂಡರು. ಸೀತಮ್ಮ ಕಾಫಿ ಮಾಡಿ ತಂದು ಎಲ್ಲರಿಗೂ ಕೊಟ್ಟಳು. ಸೀತಾರಾಮು ಬಟ್ಟಲನ್ನು ಕೈಗೆ ತೆಗೆದುಕೊಂಡು ಕ್ಷೇಮವೇ ಎಂದು ಕೇಳಿದ.

" ಏನೋ ಹೀಗೆ " ಎಂದು ಸೀತಮ್ಮ ಉತ್ತರಕೊಟ್ಟಳು.

ಅವಳ ಕಂದಿದ್ದ ಮುಖವನ್ನು ಕಂಡು ಗೆಳೆಯರಿಬ್ಬರಿಗೂ ದುಃಖ ಉಮ್ಮಳಿಸಿ ಬಂತು. ರಾಜನ ಅವಸರದ ವರ್ತನೆಯನ್ನು ಕಂಡು ಸೀತಾರಾಮೂಗೆ ಕೋಪವೂ ಬಂತು.

" ಇಷ್ಟುಬೇಗ ಮನೆಮಾಡೋದಿಕ್ಕೆ ಏನು ಕೊಳ್ಳೆ ಹೋಗಿತ್ತೋ ನಿನಗೆ. ನಮ್ಮನೆ ಇರಲಿಲ್ಲವೇ ? "

" ನಮ್ಮ ಋಣ ಯಾವದೂ ಇರಕೂಡದಪ್ಪಾ ಅವನಿಗೆ " ಎಂದು ತಿರುಮಲ ಸೇರಿಸಿದ.

" ನಿಮ್ಮ ಸ್ನೇಹದ ಋಣ ಎಂದಿಗೆ ತೀರಿಸಬಲ್ಲೆ " ಎಂದು ರಾಜ ಸ್ವಲ್ಪ ಕಷ್ಟದಿಂದ ಹೇಳಿದ. ಮಾತು ಬದಲಾಯಿಸಲೆಂದು ಅವನೇ ಸಮಾಧಾನ ತಂದುಕೊಂಡು " ಅಚ್ಚು ಹೇಗಿದ್ದಾನೆ ? " ಎಂದು ಕೇಳಿದ.

" ಚೆನ್ನಾಗಿದ್ದಾನೆ. ಮತ್ತೆ ಕಾಲೇಜಿಗೆ ಬರುತ್ತಿದ್ದಾನೆ. "

" ದೇವದಾಸ "

" ಅವನೇನಪ್ಪಾ ಅದೃಷ್ಟಶಾಲಿ. ಈ ಸಲ ಅವನಿಗೆ ಪ್ರೊಬೇಷನರಿ ನಾಮಿನೇಷನ್ ಸಿಕ್ಕುವ ಸಂಭವವಿದೆ. "

" ಎಲ್ಲಿಯಾದರೂ ಚೆನ್ನಾಗಿರಲಿ."

" ನಾಳೆ ಕಾಲೇಜಿಗೆ ಎಷ್ಟು ಹೊತ್ತಿಗೆ ಬರ್ತೀ ರಾಜ."

" ಬರ್ತೀನಿ ೨–೩ ಗಂಟೆ ಹೊತ್ತಿಗೆ."

" ನಾವು ಕಾಯುತ್ತಿರುತ್ತೇವೆ."

" ಆಗಲಿ " ಎಂದ. ಗೆಳೆಯರು ಎದ್ದು ಹೊರಟರು. ಅವರ ಹೃದಯ ಭಾರವಾಗಿತ್ತು. ರಾಜನ ಹೃದಯವಂತೂ ಸೀಸದ ಗುಂಡಿನಂತೆ ತೂಗುತ್ತಿತ್ತು. ಎಲ್ಲರ ಈ ಮೂಕವೇದನೆ, ಅದರಿಂದ ಚಿಮ್ಮುತ್ತಿದ್ದ ಅಂತಕರಣವನ್ನು ಸೀತಮ್ಮ ಒಳಗಿಂದಲೇ ನೋಡಿದಳು. ಇಂತಹ ಗೆಳೆತನವೂ ಒಂದು ಭಾಗ್ಯವೆಂದು ಅವಳ ಮನಸ್ಸು ಹೇಳಿತು.

ಗೆಳೆಯರಿಗೆ ಮಾತುಕೊಟ್ಟಿದ್ದಂತೆ ಮಾರನೆಯದಿವಸ ರಾಜ ಕಾಲೇಜಿಗೆ ಹೋದ. ಪ್ರಿನ್ಸಿಪಾಲರ ಆಳಿನ ಕೈಯಲ್ಲಿ ಭೇಟಿಯ ಚೀಟಿಯನ್ನು ಒಳಗೆ ಕಳುಹಿಸಿದ. ಪ್ರಿನ್ಸಿಪಾಲರು ಸಂತೋಷದಿಂದ ಎದ್ದು ಬಂದು ರಾಜನ ಕೈ ಹಿಡಿದು ಒಳಗೆ ಕರೆದೊಯ್ದರು.

" ಕುಳಿತುಕೋಪ್ಪ."

ರಾಜ ಕುಳಿತುಕೊಳ್ಳುತ್ತಲೂ " ನಿನ್ನ ಪರೀಕ್ಷೆಯ ಸುದ್ದಿ ಕೇಳಿ ತುಂಬ ವ್ಯಸನವಾಯಿತು ರಾಜಾಚಾರ್. ಇಷ್ಟು ದಿವಸ ಏನಾಗಿಬಿಟ್ಟಿದ್ದೆ " ಎಂದರು.

" ಮನೆಯ ಕೆಲಸ ಬಹಳವಾಗಿತ್ತು ಸಾರ್."

" ಕಾಲೇಜಿಗೆ ಏಕೆ ಬರಲಿಲ್ಲ."

" ಇನ್ನು ಕಾಲೇಜಿಗೆ ಬರುವ ಸಂಭವವಿಲ್ಲ. ವಿದ್ಯಾರ್ಜನೆ ನನ್ನ ಹಣೆಯಲ್ಲಿ ಬರೆದಿಲ್ಲ."

" ಏಕೆ, ನಿಮ್ಮ ತಂದೆಯವರು ಮುಂದೆ ಸಹಾಯಮಾಡುವುದಿಕ್ಕಾಗುವುದಿಲ್ಲವೆಂದರೇ ?"

" ಹಾಗಲ್ಲ........"

" ಹೋಗಲಿ, ನಾನು ಸಹಾಯಮಾಡುತ್ತೇನೆ. ಮುಂದಕ್ಕೆ ಓದು. ನಿನ್ನಂತಹವನನ್ನು ಕಳೆದುಕೊಳ್ಳುವುದಕ್ಕೆ ಕಾಲೇಜು ಸಿದ್ಧವಾಗಿಲ್ಲ."

" ನಿಮ್ಮ ಔದಾರ್ಯಕ್ಕೆ ತುಂಬ ಋಣಿಯಾಗಿದ್ದೇನೆ. ಆದರೆ ಮುಂದೆ ಓದುವುದು ಸಾಧ್ಯವಿಲ್ಲ. ಮನೆ ಜವಾಬ್ದಾರಿ ಬಹಳವಾಗಿಬಿಟ್ಟಿದೆ."

" ಮುಂದೇನು ಮಾಡುತ್ತೀ."

" ಕೆಲಸ ಹುಡುಕುತ್ತಿದ್ದೇನೆ."

" ಯಾವದಾದರೂ ಕೆಲಸ ಸಿಕ್ಕಿತೇ."

" ಇನ್ನೂ ಸಿಕ್ಕಿಲ್ಲ. ಎಲ್ಲಿಹೋದರೂ ಶಿಫಾರಸು ಬೇಕೆನ್ನುತ್ತಾರೆ."

" ನನ್ನಿಂದ ಏನಾದರೂ ಪ್ರಯೋಜನವಾಗಬಹುದೇ."

" ತಾವು ಒಂದು ಸರ್ಟಿಫಿಕೆಟ್ ಕೊಟ್ಟರೆ ಪ್ರಯೋಜನವಾಗಬಹುದು."

" ಕೆಲಸಕ್ಕೆ ಸೇರುವುದನ್ನು ನಿಶ್ಚಯ ಮಾಡಿಬಿಟ್ಟಿರುವೆಯಾ."

" ಮಾಡಲೇಬೇಕಾಯಿತು."

ಪ್ರಿನ್ಸಿಪಾಲರು ಸ್ವಲ್ಪಹೊತ್ತು ಯೋಚಿಸಿ ಎರಡು ಕಾಗದಗಳನ್ನು ಬರೆದುಕೊಟ್ಟರು.

" ಒಂದು ನೀನು ಕೇಳಿದ ಸರ್ಟಿಫಿಕೇಟ್. ಇನ್ನೊಂದು ರೆಸಿಡೆನ್ಸಿ ಆಫೀಸಿನ ಮ್ಯಾನೇಜರಿಗೆ ಕಾಗದ. ಅಲ್ಲಿ ಕಾಗದ ತೆಗೆದುಕೊಂಡು ಹೋಗು ಕೆಲಸ ಸಿಕ್ಕಬಹುದು."

" ನಿಮ್ಮ ಉಪಕಾರಕ್ಕೆ........ "

" ಇರಲಿ ಮೈ ಬಾಯ್ (My Boy) ನಿನಗೆ ಯಾವಾಗ ಏನು ಬೇಕಾದರೂ ಬಂದು ಕೇಳು. ಕಾಲೇಜಿಗೆ ಆಗಾಗ್ಗೆ ಬರುತ್ತಿರು."

ರಾಜನ ಕೈಯನ್ನು ಪ್ರೀತಿಯಿಂದ ಹಿಡಿದು ಕುಲುಕಿಸುತ್ತಾ 'ದೇವರು ನಿನ್ನನ್ನು ಕಾಪಾಡಲಿ' ಎಂದರು. ಅವರ ಧ್ವನಿ ಗದ್ಗದವಾಗಿತ್ತು.

ಪ್ರಿನ್ಸಿಪಾಲರ ಕೋಣೆಯಿಂದ ಬರುವುದನ್ನೇ ಅವನ ಗೆಳೆಯರು ನಿರೀಕ್ಷಿಸುತ್ತಿದ್ದರು. ತಿರುಮಲ, ಸೀತಾರಾಮು ಜತೆಗೆ ದೇವದಾಸ್, ಅಚ್ಯುತರೂ ಸಿದ್ಧರಾಗಿದ್ದರು. ರಾಜನನ್ನು ಕರೆದೊಯ್ದು ಮೊದಲು ಕಾಫಿ ತಿಂಡಿ ಸಮಾರಾಧನೆ ಮಾಡಿಸಿದರು. ದೇವದಾಸ ತಡೆತಡೆದು " ಮನೆ ಏಕೆ ಬಿಟ್ಟೆ ರಾಜಣ್ಣ " ಎಂದ

" ಬಿಡಬೇಕಾಯಿತಪ್ಪಾ, ನನ್ನಮಾತು ಹಾಗಿರಲಿ. ನಿನ್ನವಿಷಯ ಹೇಳು. ಯಾವಾಗ ಪ್ರೊಬೇಷನರಿ ಹುದ್ದೆ."

ಸದ್ಯದಲ್ಲಿಯೇ ಸಿಕ್ಕಬಹುದು."

"ಅಚ್ಛಾ, ಕಾಲೇಜಿಗೆ ಹೋಗುತ್ತಿದ್ದಿಯಾ."

"ಹೋಗುತ್ತಿದ್ದೀನಪ್ಪಾ, ನಾನೂ ನಿನ್ನ ಮೇಲ್ಪಂಕ್ತಿಯನ್ನನುಸರಿಸ ಬೇಕಾಗುತ್ತದೋ ಏನೋ."

"ದೇವದಾಸ್, ನಿನ್ನ–ಸೀತಾರಾಮೂ ವ್ಯಾಜ್ಯ ಹರಿಯಿತೇ."

"ಇಷ್ಟು ದಿವಸ ಉಳಿದಿರುತ್ತದೆಯೇ?"

"ನಾವು ಐದು ಜನವೂ ಒಂದು ಕುಟುಂಬ. ವ್ಯಾಜ್ಯ ಕಾಯುತ್ತೇವೆ. ಮಾತಿಗೆ ಮಾತು ಬರುತ್ತದೆ. ಆದರೆ ಅದು ಮನಸ್ಸಿನಲ್ಲಿ ಉಳಿಯುವುದಿಲ್ಲ." ಎಂದು ಸೀತಾರಾಮು ಹೇಳಿದ.

"ನನ್ನ ಬಾಳಿಗಂತೂ ನೀನು ಹೇಳಿದ ಮಾತು ದಾರಿ ದೀವಿಗೆ" ಎಂದು ರಾಜ ಹೇಳಿದ. ಸೀತಾರಾಮು ಮನಸ್ಸಿನಲ್ಲಿ ಒಂದು ಪ್ರಶ್ನೆ ಕಟಿಯುತ್ತಿತ್ತು. ಧೈರ್ಯ ತಂದುಕೊಂಡು ಕೇಳಿಯೇ ಬಿಟ್ಟ.

"ನೀನೂ, ತಂದೆಯವರೂ ಮೊದಲಿನ ಹಾಗೆ ಒಂದಾಗುವುದಕ್ಕೆ ಸಾಧ್ಯವಿಲ್ಲವೇ ರಾಜಾ."

"ಈ ಜನ್ಮದಲ್ಲಿ ಸಾಧ್ಯವಿಲ್ಲ."

ಅವನು ಹೇಳಿದ ರೀತಿಯಲ್ಲಿ ಮಾತನ್ನು ಮುಂದುವರಿಸಲಿಕ್ಕೆ ಯಾರಿಗೂ ಧೈರ್ಯವಾಗಲಿಲ್ಲ. ರಾಜ ಹೊತ್ತಾಯಿತೆಂದು ಮನೆಗೆ ಹೊರಟು ನಿಲ್ಲುತ್ತಲು ದೇವದಾಸ "ಮನೆ ಕಡೆ ಯಾವಾಗ ಬರುತ್ತೀ?" ಎಂದ.

"ಬರುತ್ತೇನೆ."

"ನೀನು ಬರದಿದ್ದರೆ ನಾನು ಬರಬಹುದೇ?"

"ಬೇಡ ಅಂದವರು ಯಾರು?"

"ಸೀತಾರಾಮು ನಿನ್ನ ಮನೆ ತೋರಿಸುವುದಕ್ಕೆ ಒಪ್ಪಲಿಲ್ಲ ಅದಕ್ಕೋಸ್ಕರ ಕೇಳಿದೆ."

ತನ್ನ ಉಗ್ರ ಶಾಸನದಿಂದ ಗೆಳೆಯರಿಗೆ ಎಷ್ಟು ನೋವಾಯಿತೆಂಬುದರ ಅರಿವು ರಾಜನಿಗಾಯಿತು. ಆದರೆ—ವಿಧಿಯಿಲ್ಲ. ಅವರ ನೋವು ತನ್ನ

ನೋವಲ್ಲವೇ? ಎಂದುಕೊಂಡು ಕಾಲೆಳೆದುಕೊಂಡು ಮನೆಯ ಕಡೆ ಹೊರಟೇಬಿಟ್ಟ.

ವಿಶ್ವಸಾಹಸವಾದರೂ ಮಾಡಿ ತಂದೆಮಕ್ಕಳನ್ನು ಮತ್ತೆ ಕೂಡಿಸ ಬೇಕೆಂಬ ಆಸೆ ಸೀತಾರಾಮು ಮನಸ್ಸಿನಲ್ಲಿ ದೃಢವಾಗಿ ನಿಂತುಬಿಟ್ಟಿತು. ಇದರಿಂದ ರಾಜನಿಗೆ ಕೋಪಬರಬಹುದು. ತಮ್ಮ ಸ್ನೇಹಕ್ಕೇ ಈ ಪ್ರಯತ್ನ ಕೊಡಲಿಯಾಗಿ ಪರಿಣಮಿಸಬಹುದು. ಏನಾದರೂ ಚಿಂತೆಯಿಲ್ಲ. ಒಡೆ ದಿರುವ ಅವರ ಸಂಸಾರವನ್ನು ಮತ್ತೆ ಒಂದುಗೂಡಿಸಲೇಬೇಕೆಂದು ನಿರ್ಧರಿಸಿದ.

ಇದೇ ನಿರ್ಧಾರ ನೀಲನ ಮನಸ್ಸಿಗೂ ಹೊಳೆದಿತ್ತು. ಇಷ್ಟೆಲ್ಲ ಅನರ್ಥಕ್ಕೆ ತಾನೇ ಕಾರಣಳೆಂದು ಅವಳು ನಂಬಿದ್ದಳು. ರಾಜ ತನ್ನ ಮನೆಬಿಟ್ಟು ಹೋದ ಮಾರನೆಯ ದಿವಸ ಅವನಿಗೆ ನಿಂಗನ ಕೈಯಲ್ಲಿ ಹೇಳಿ ಕಳಿಸಿದ್ದಳು. 'ರಾಜಪ್ನೋರು ಮನೆ ಬುಟ್ಟುಬಿಟ್ಟು ಒಂಟೋಗಿ ಬಿಟ್ರಂತವ್ವಾ' ಎಂದು ಅವನು ಸುದ್ದಿ ತಂದಿದ್ದ. ತಂದೆಮಕ್ಕಳನ್ನು ತಾನೇ ಅಗಲಿಸಿ ದಂತಾಯಿತಲ್ಲಾ ಎಂದು ಹಲುಬಿದಳು. "ಏನಾದರೂ ಮಾಡಿ ಅವರನ್ನು ಒಂದುಗೂಡಿಸಬೇಕು." ಎಂದು ಸಂಕಲ್ಪಮಾಡಿದಳು.

ತನ್ನ ರಾಜ ತನ್ನ ವಿಷಯದಲ್ಲಿ ತಪ್ಪು ತಿಳಿಯುವಂತಾಯಿತಲ್ಲಾ ಎಂಬುದೇ ಅವಳ ಕೊರಗು. ಆಚಾರ್ಯರಿಗೆ ಅವಳು ಮೋಸಮಾಡಿದ್ದಳು ನಿಜ. ಆದರೆ ರಾಜನಿಗೆ ಅವಳು ಮೋಸಮಾಡಲಿಲ್ಲ. ರಾಜ, ಆಚಾರ್ಯರು ತಂದೆಮಕ್ಕಳೆಂದು ಗೊತ್ತಾಗಿದ್ದರೆ............ಗೊತ್ತಾಗಿದ್ದರೆ ಇಷ್ಟೆಲ್ಲಾ ಅನರ್ಥ ಸಂಭವಿಸುತ್ತಲೇ ಇರಲಿಲ್ಲ. ರಾಜನ ಪ್ರೇಮವಂತೂ ತನ್ನ ಪಾಲಿಗೆ ಕನಸಾಯಿತೆಂಬುದನ್ನು ಅರಿತಳು. ಆದರೆ ಸತ್ಯ ಅವನಿಗೆ ಗೊತ್ತಾಗಬೇಕು. ತನ್ನ ನಿಷ್ಕಲ್ಮಷ ಮನಸ್ಸಿನ ಪರಿಚಯ ಅವನಿಗಾಗಬೇಕೆಂದು ಅವಳ ಆಸೆ. ಅವನ ನವಪಲ್ಲವದಂತಹ ಮನಸ್ಸು ಇದರಿಂದ ಸೊರಗಬಾರದು. ಅದು ಕಲೆಯ ವಸಂತವನ. ಅದನ್ನು ಶಿಶಿರ ಪ್ರವೇಶಿಸಿ ಸ್ಮಶಾನವನ್ನಾಗಿಸಕೂಡದು ಎಂದು ಅವಳ ಬಯಕೆ.

ಸೀತಾರಾಮು ಸುಮ್ಮನೆ ಕೂಡಲಿಲ್ಲ. ಸಮಯವನ್ನು ಸಾಧಿಸಿ ನರಸಿಂ ಹಾಚಾರ್ಯರ ಭೆಟ್ಟಿಯಾದ. ಆಚಾರ್ಯರು ಬಾಯಿತುಂಬ ಮಾತನಾಡಿ

ದರು. ಉಪಚಾರಕ್ಕೆ ಏನೂ ಕೊರತೆ ತರಲಿಲ್ಲ. ಆದರೆ ಮುಖ್ಯ ವಿಷಯದ ಪ್ರಸ್ತಾಪ ಮಾತ್ರ ಎತ್ತಲಿಲ್ಲ.

"ರಾಜ ಮಾಡಿದ ಅಪರಾಧವೇನೂ ಆಚಾರ್ರೇ" ಎಂದು ತಿರುಮಲ ಕೇಳಿದ.

"ಅದೊಂದು ಪ್ರಶ್ನೆ ಕೇಳಬೇಡ" ಎಂದವರು ಖಡಾಖಂಡಿತವಾಗಿ ನುಡಿದರು. ಆ ಪ್ರಶ್ನೆಗೆ ಬಡಪೆಟ್ಟಿಗೆ ರಾಜನಿಂದಲೂ ಉತ್ತರ ದೊರೆಯುತ್ತಿರಲಿಲ್ಲ. ಇದರ ಚಿದಂಬರ ರಹಸ್ಯವೇನಿರಬಹುದೆಂದು ಸೀತಾರಾಮು ಯೋಚಿಸಿ ಒಂದು ದಿವಸ ಆಚಾರ್ಯರು ಮನೆಯಲ್ಲಿಲ್ಲದ ಹೊತ್ತಿನಲ್ಲಿ ಬಂದು ಜೀವಕ್ಕನೊಂದಿಗೆ ಪ್ರಸ್ತಾಪಿಸಿದ. ಅಂದಿನ ರಾತ್ರಿ ರಾಜ ಮನೆಗೆ ಬಂದು ಹೆಂಡತಿಯನ್ನು ಕರೆದುಕೊಂಡು ಹೋದದ್ದು, ಅವನು ಹೋದ ಮೇಲೆ ಬಂದ ಆಚಾರ್ಯರು ಮಗನನ್ನು ಹಿಂದಕ್ಕೆ ಕರೆತರಲು ಒಪ್ಪದಿದ್ದದ್ದು ಎರಡು ವಿಷಯಗಳನ್ನು ಸವಿಸ್ತಾರವಾಗಿ ಜೀವಕ್ಕ ಹೇಳಿದಳು. ರಹಸ್ಯಭೇದನ ಅವಳಿಂದಲೂ ಸಾಧ್ಯವಾಗಲಿಲ್ಲ. ಸೀತಾರಾಮುವನ್ನು ಗೋಗರೆದು ಜೀವಕ್ಕ ರಾಜನ ಮನೆಯ ಪತ್ತೆಯನ್ನು ತಿಳಿದುಕೊಂಡಳು. "ರಾಜ ಎಷ್ಟು ಕೇಳಿದರೂ ಮನೆಯ ಗುರುತು ನೀನು ಹೇಳಿದೆ ಎಂದು ಹೇಳುವುದಿಲ್ಲಪ್ಪಾ. ಹೆದರಬೇಡ" ಎಂದು ಧೈರ್ಯವನ್ನಿತ್ತಳು.

ರಾಜ ಗುರುಗಳ ಮನೆಗೆ ಬರಬಹುದೆಂದು ನೀಲಾ ಆಶಿಸಿದಳು. ದಿವಸದಿವಸಗಳು ಕಾದರೂ ಅವನು ಅಲ್ಲಿಗೂ ಬರಲಿಲ್ಲ. ಒಂದು ದಿನ ಧೈರ್ಯಮಾಡಿ ಗುರುಗಳನ್ನೇ ಕೇಳಿದಳು. ತಮಗೆ ಗೊತ್ತಿಲ್ಲವೆಂದು ಅವರೂ ಹೇಳಿಬಿಟ್ಟರು. ರಾಜ ಏನಾದನೆಂಬುದು ಗುರುಗಳಿಗೂ ಸಮಸ್ಯೆಯಾಗಿತ್ತು. ಅವನು ಪಾಠಕ್ಕೆ ಬರುವುದನ್ನೇ ನಿಲ್ಲಿಸಿಬಿಟ್ಟಿದ್ದ. ಯೂನಿಯನ್ ಪತ್ತೆ ಹಚ್ಚಿ ಅಲ್ಲಿಗೆ ತಾನೇ ಎರಡುಮೂರು ಸಲ ಹೋಗಿಬಂದಳು. ಅದರ ಬಾಗಿಲಿಗೆ ಯಾವಾಗಲೂ ಬೀಗಮುದ್ರೆ ಹಾಕಿದ್ದುದನ್ನು ಕಂಡು ನಿರಾಶಳಾದಳು. ಅವಳ ಈ ಅನ್ವೇಷಣೆ ಅವಳ ತಾಯಿಗೆ ಬೇಡವಾಗಿತ್ತು. "ಋಣ ಹರಿದು ಹೋಯಿತು. ಇನ್ನೇಕೆ ಅದರ ಪಂಚಾಯಿತಿ" ಎಂದು ಅವಳು ತೀರ್ಮಾನ ಕೊಟ್ಟಿದ್ದಳು. ರಾಜನ ಮಾತೆಂದರೆ ತಾಯಿ ಕಿಡಿಕಿಡಿಯಾಗುತ್ತಿದ್ದಳು.

---

ಪ್ರಿನ್ಸಿಪಾಲರ ಪರಿಚಯ ಕಾಗದ ಬಹಳ ಕೆಲಸಮಾಡಿತು. ರೆಸಿಡೆನ್ಸಿ ಆಫೀಸಿನಲ್ಲಿ ಅದರ ಬಲದಿಂದ ರಾಜನಿಗೆ ಪ್ರವೇಶ ಸಿಕ್ಕಿತು. ಮ್ಯಾನೇಜರು ವಿಶ್ವಾಸದಿಂದ ಮಾತನಾಡಿಸಿದರು.

"ನೀವು ಎಷ್ಟು ಸಂಬಳ ನಿರೀಕ್ಷಿಸುತ್ತೀರಿ?"

"ನೀವು ಕೊಟ್ಟಷ್ಟು."

"ವಿದ್ಯಾಭ್ಯಾಸವನ್ನೇತಕ್ಕೆ ಮುಂದುವರಿಸಲಿಲ್ಲ?"

"ಏನೊ ಮನೆಯ ತಾಪತ್ರಯ, ಸಾಧ್ಯವಿಲ್ಲ."

"ನಿಮ್ಮಂತಹವರಿಗೆ ಹೀಗಾದ್ದು ತುಂಬ ವಿಷಾದ, ಪ್ರಿನ್ಸಿಪಾಲರು ಬಹಳ ಚೆನ್ನಾಗಿ ಬರೆದಿದ್ದಾರೆ."

"ನನ್ನ ಕಂಡರೆ ಅವರಿಗೆ ತುಂಬ ವಿಶ್ವಾಸ."

"ನೀವು ಉತ್ತಮ ಕಲಾವಿದರೆಂದು ಅವರು ಬರೆಯುತ್ತಾರೆ."

"ಅವರ ವಿಶ್ವಾಸದ ಕುರುಹು"

"ಕಲಾವಿದರಾಗಿ ಈ ನಿರ್ಜೀವ ವೃತ್ತಿಯನ್ನೇತಕ್ಕೆ ಸೇರುವಿರಿ?"

"ನನ್ನ ಕರ್ಮ."

"ಸದ್ಯಕ್ಕೆ ೬೦ ರೂ. ಕೊಡಲಾಗುತ್ತದೆ. ಸಾಕೋ?"

"ನಾನು ಭಿಕ್ಷುಕ. ಆ ಪ್ರಶ್ನೆಯೇ ಬರುವುದಿಲ್ಲ."

"ಹಾಗೆ ತಿಳಿದುಕೊಳ್ಳಬೇಡಿ, ರಾಜಾಚಾರ್. ನಾನು ಈ ಸ್ಥಾನಕ್ಕೆ ಬಂದಿರುವುದೂ ಪ್ರಿನ್ಸಿಪಾಲ್ ಸಾಹೇಬರವರ ಕೃಪಾವಿಶೇಷದಿಂದ."

"ನೀವು ಕಾಲೇಜಿನಲ್ಲಿ ಅವರ ವಿದ್ಯಾರ್ಥಿಯಾಗಿದ್ದಿರಾ?"

"ಇದ್ದೆ."

"ನೋಡಿ, ಈ ಬಾಳು ನೀರಸವಾಗುವುದೆಂದಿದ್ದೆ. ಕಪ್ಪು ಮೋಡಗಳ ಮೇಲೆ ಬೆಳ್ಳಿಯ ಬೆಳಕು ಬಿತ್ತರಿಸಿದಂತಾಯಿತು, ನಿಮ್ಮ ಪರಿಚಯವಾದದ್ದು."

"ನಿಮಗೆ ನನ್ನ ಕೈಯಲ್ಲಿ ಏನು ಸಾಧ್ಯವೋ ಅದನ್ನು ನಾನು ಮಾಡಲು ಸಿದ್ಧನಿದ್ದೇನೆ."

"ನಿಮ್ಮಲ್ಲಿ ಮುಚ್ಚುಮರೆಯೇಕೆ? ನಾನಿಲ್ಲಿ ಬಹಳ ಕಾಲ ನಿಲ್ಲಲಾರೆ. ಕಲೆ ಒಂದೇಸಮನೆ ನನ್ನನ್ನು ಕರೆಯುತ್ತಿದೆ. ಹಗಲೂ ರಾತ್ರಿ ನನಗೆ ಅದೇ ಧ್ಯಾನ."

"ನಿಮ್ಮ ಮನಸ್ಸಿನ ಪ್ರವೃತ್ತಿಯನ್ನು ನೀವು ಅನುಸರಿಸಲೆಂದು ನನ್ನದೂ ಆಸೆ. ನಿಮಗೆ ಬೇಕಾದಾಗ ಬಿಟ್ಟು ಹೋಗಬಹುದು."

"ಮಹೋಪಕಾರವಾಯಿತು."

ಗಂಡನಿಗೆ ಕೆಲಸ ಸಿಕ್ಕಿದ ಸಂಗತಿ ಕೇಳಿ ಸೀತಮ್ಮ ಹಿಗ್ಗಿ, ದೇವರಿಗೆ ತುಪ್ಪದ ದೀಪ ಹಚ್ಚಿಟ್ಟಳು. ಕೆಲಸ ಸಿಕ್ಕಿದ್ದು ಒಂದು ಭಾಗದಲ್ಲಿ ಸಂತೋಷವಾದರೆ, ನಾಟಕ ಜೀವನ ತಪ್ಪಿದ್ದು ತೊಂಭತ್ತೊಂಭತ್ತು ಭಾಗದ ಸಂತೋಷವಾಗಿತ್ತು. ಗಂಡನ ತಲೆಯನ್ನು ನೇವರಿಸುತ್ತಾ "ಒಂದು ಸುದ್ದಿ ಇದೆ" ಎಂದಳು.

"ಏನು?"

"ಮಧ್ಯಾಹ್ನ ಜೀವಕ್ಕ ಬಂದಿದ್ದರು."

"ಹಾಃ! ಅವಳಿಗೆ ಮನೆ ಯಾರು ತೋರಿಸಿದರು?"

"ಅದನ್ನು ಅವರು ಹೇಳಲಿಲ್ಲ. ತಿಳಿದುಕೊಳ್ಳಬೇಕೆಂದು ಎಷ್ಟೋ ಪ್ರಯತ್ನಿಸಿದೆ, ಸಫಲವಾಗಲಿಲ್ಲ."

"ಏನಂತೆ ಸಮಾಚಾರ?"

"ಹಾಲಿನಂತಹ ಸಂಸಾರ ಒಡೆದುಹೋಯಿತಲ್ಲಾ ಎಂದು ಕಣ್ಣೀರು ಹಾಕಿಕೊಂಡರು."

"ಅನಿವಾರ್ಯ—ಏನುಮಾಡುವುದು?"

"ನನಗೆ ಔಷಧ ತಂದು ಕೊಟ್ಟಿದ್ದಾರೆ. ನೋವು ಬಂದರೆ ಖಂಡಿತ ಹೇಳಿ ಕಳುಹಿಸು ಎಂದು ಹೇಳಿದರು."

"ಅಣ್ಣ ಹೇಗಿದ್ದಾರಂತೆ?"

"ಬಹಳ ತೆಗೆದುಹೋಗಿದ್ದಾರಂತೆ. ನಿಮ್ಮದೇ ಮನೋರೋಗವಂತೆ."

"ಮುಖ್ಯ ನಾನು ಪಾಪಿ."

"ಏನಾಯಿತು, ಈಗಲಾದರೂ ಹೇಳಲ್ಲವೆ?"

" ಈಗ ಬೇಡ ಸೀತಾ, ಒಂದಲ್ಲ ಒಂದು ದಿವಸ ಹೇಳುತ್ತೇನೆ. "

" ಜೀವಕ್ಕನನ್ನೂ ನೀವು ಹೋಗಿ ನೋಡುವುದಿಲ್ಲವೇ? "

" ಯಾರನ್ನೂ ನೋಡುವುದಿಲ್ಲ. "

" ಅವರೇನು ಅಪರಾಧಮಾಡಿದರು. "

" ಅಪರಾಧ ಯಾರದೂ ಅಲ್ಲ. ನನ್ನದು. ಆಗೋ, ಸೀತಾರಾಮು ಬರುತ್ತಿದ್ದಾನೆ. ನೀನು ಒಳಗೆ ಹೋಗು "

" ಬಾರಯ್ಯ, ತಿರುಗಾಡಿಕೊಂಡು ಬರೋಣ " ಎಂದು ಸೀತಾರಾಮು ಕರೆದ. ರಾಜ ಬಟ್ಟೆಹಾಕಿಕೊಂಡು ಅವನ ಜತೆ ಹೊರಟ. ರಾಜನಿಗೆ ಕೆಲಸ ಸಿಕ್ಕಿದ ಸಂಗತಿ ಕೇಳಿ ಸೀತಾರಾಮುಗೆ ಹಿಡಿಸಲಾರದಷ್ಟು ಸಂತೋಷವಾಯಿತು.

" ಈಚೆಗೆ ಗುರುಗಳನ್ನು ನೋಡಿದ್ದೆಯಾ ರಾಜಾ? "

" ಇಲ್ಲ. ಆಕಡೆ ಹೋಗಿಲ್ಲ. ಹೇಗಿದ್ದಾರೆ? "

"ಚೆನ್ನಾಗಿದ್ದಾರೆ. ನಿನ್ನ ನೋಡಬೇಕೂಂತ ಬಹಳ ಬಯಸುತ್ತಿದ್ದಾರೆ."

" ನನ್ನನ್ನು ಅವರು ಕ್ಷಮಿಸಬೇಕು ಮತ್ತು ಮರೆತುಬಿಡಬೇಕು. "

" ಅವರನ್ನೂ ದೂರಮಾಡಿ ಬಿಟ್ಟೆಯಾ? "

" ಇಲ್ಲ ಸೀತಾರಾಮು, ದೂರಮಾಡಿಲ್ಲಾ, ದೂರವಾಗಿದ್ದೇನೆ."

" ಇನ್ನೊಂದು ಮಾತು. ನೀನು ಕೋಪಿಸಿಕೊಳ್ಳುವುದಿಲ್ಲವೆಂದು ಮಾತುಕೊಟ್ಟರೆ ಹೇಳುತ್ತೇನೆ. "

" ಹೇಳು. ನೀನೂ ಹೀಗೆ ಕೇಳಬೇಕೇ? "

" ಪ್ರಸಂಗ ಅಂತಹದು. ನೀನು ಮಾತುಕೊಡಬೇಕು. ಈ ವಿಷಯ ನಮ್ಮಿಬ್ಬರ ಮಧುರಸ್ನೇಹಕ್ಕೆ ಹುಳಿ ಹಿಂಡಕೂಡದು. "

" ಮಾತುಕೊಟ್ಟಿದ್ದೇನೆ. ಹೇಳು. "

ಸೀತಾರಾಮು ಕಿಸೆಯಿಂದ ಒಂದು ಕಾಗದ ತೆಗೆದು ರಾಜನ ಕೈಗಿತ್ತ. ಮೇಲ್ವಿಳಾಸ ಬರೆದಿರಲಿಲ್ಲ. ಒಡೆದು ನೋಡಿದ. ಮುಖ ವಿವರ್ಣವಾಯಿತು. ಓದಿಕೊಂಡು, ಪತ್ರವನ್ನು ಕಿಸೆ ಸೇರಿಸಿ ಮಾತನಾಡದೆ ಸೀತಾರಾಮು ಜತೆ ನಡೆದ.

" ಓದಿಕೊಂಡೆಯಾ ? "

" ಹೂ "

" ಉತ್ತರವೇನು ? "

" ಇವಳು ನಿನಗೆ ಯಾವಾಗ ಸಿಕ್ಕಿದ್ದಳು ? "

" ಗುರುಗಳ ಮನೆಗೆ ಹೋಗಿದ್ದೆ. ಅಲ್ಲಿಗೆ ಬಂದಿದ್ದಳು. ನಿನ್ನ ಮಾತೇ ಹೊರಟಿತ್ತು. ಖಂಡಿತ ಮನೆಗೆ ಬಂದು ಹೋಗಬೇಕೆಂದು ಹೇಳಿದಳು. "

" ಹೋಗಿದ್ದೆಯಾ ? "

" ಹೋಗಿದ್ದೆ. "

" ಏನು ಹೇಳಿದಳು ? "

" ಒಮ್ಮೆ ನಿನ್ನನ್ನು ಕರೆತರಬೇಕೆಂದು ಬೇಡಿಕೊಂಡಳು. "

" ಅದಕ್ಕೆ ನೀನೇನು ಹೇಳಿದೆ ? "

" ಅವಳ ದುಃಖವನ್ನು ನೋಡಲಾರದೆ ಆಗಲೆಂದೆ. ಈ ಕಾಗದ ಬರೆದುಕೊಟ್ಟಳು. "

" ಇದೊಂದು ವಿಷಯ ಕ್ಷಮಿಸು ಸೀತಾರಾಮು. ಅವಳನ್ನು ನಾನು ನೋಡುವುದಕ್ಕಾಗುವುದಿಲ್ಲ. "

" ನನಗೋಸ್ಕರ ದಯೆಯಿಟ್ಟು ದೊಡ್ಡ ಮನಸ್ಸು ಮಾಡು. ಹೆಣ್ಣು ಜೀವ—ಬಹಳ ನೊಂದಿದೆ. "

" ಅದೆಲ್ಲಾ ಸೋಗು. "

" ಸೋಗಲ್ಲ ರಾಜಣ್ಣ. ಸೋಗಿಗೂ ಕರುಳಿನಕೂಗಿಗೂ ಅಂತರವನ್ನು ಕಾಣದಷ್ಟು ಮೂಢನಲ್ಲ ನಾನು. "

" ಇನ್ನೇನು ಹೇಳಿದಳು ? "

" ಏನು ಹೇಳುತ್ತಾಳೆ ಪಾಪ ! "

" ಅವಳನ್ನು ನಾನು ನೋಡುವುದಕ್ಕೆ ಸಾಧ್ಯವಿಲ್ಲ ಸೀತಾರಾಮೂ. ಇನ್ನೊಮ್ಮೆ ಕಂಡರೆ ಹೇಳಿಬಿಡು. ದಯೆಯಿಟ್ಟು ನನ್ನ ಮನೆ ಪರಿಚಯವನ್ನು ಮಾತ್ರ ಅವಳಿಗೆ ಹೇಳಬೇಡ. "

"ಉಂಟೇ?"

"ಅವಳ ಸ್ನೇಹದ ವಿಷಯ ನಿಮ್ಮೆಲ್ಲರಲ್ಲಿಯೂ ಮರೆಮಾಚಿದೆ."

"ಚಿಂತೆಯಿಲ್ಲ ರಾಜಾ, ಅದೇನು ಊರಿಗೆ ಡಂಗುರ ಸಾರುವ ವಿಷಯವಲ್ಲ."

"ಅವಳೇನೋ ಆ ದೂಷಿತ ಜಾತಿಯಲ್ಲಿ ಹುಟ್ಟಿದಳು. ಆದರೆ ಅವಳ ವೃತ್ತಿ ಜಾತಿಯ ರೀತಿಯನ್ನು ಅನುಸರಿಸಲಿಲ್ಲ. ಮನಸ್ಸು ಸ್ಫಟಿಕದಂತಿತ್ತು. ಕಲೆಯ ದಿವ್ಯಕಳೆ ಅವಳಲ್ಲಿ ಮೂರ್ತೀಭವಿಸಿತ್ತು."

"ಈಗ ಅಂತಹವಳನ್ನು ನೋಡುವುದೂ ನಿನಗೆ ಬೇಡವಾಗಿದೆಯೇ?"

"ಆಗಿದೆ."

"ಆಗಿಲ್ಲ ರಾಜಣ್ಣ. ನಿನಗೆ ನೀನು ವಂಚನೆಮಾಡಿಕೊಳ್ಳುತ್ತಿರುವೆ. ನಿನ್ನನ್ನು ನೋಡಲು ಅವಳು ಹೇಗೆ ಹಂಬಲಿಸುತ್ತಿದ್ದಾಳೆಯೋ ಹಾಗೆ ಅವಳನ್ನು ನೋಡಲು ನೀನೂ ಹಂಬಲಿಸುತ್ತಿದ್ದೀ. ಆದರೆ ನೋಡಕೂಡ ದೆಂದು ಪ್ರತಿಜ್ಞೆ ಮಾಡಿದ್ದೀ. ಅದಕ್ಕೆ ಭಂಗಬರಕೂಡದೆಂದು ಸಾಹಸ ಪಡುತ್ತಿದ್ದೀ."

"ನೀನು ಹೇಳಿದ್ದು ನಿಜ."

"ಒಮ್ಮೆ ನೋಡಿಬಿಟ್ಟು ಮನಸ್ಸಿನ ಮೋಡವನ್ನು ಚದರಿಸಿಕೊಳ್ಳುವುದು ವಿವೇಕದ ಲಕ್ಷಣ."

"ನನ್ನಲ್ಲಿ ವಿಶೇಷವೇನೂ ಉಳಿದಿಲ್ಲ ಸೀತಾರಾಮು. ಒಂದು ಯಂತ್ರ ದಂತೆ ಚಲಿಸುತ್ತಿದ್ದೇನೆ."

"ನಾನೀಗ ನಿನ್ನನ್ನು ಬಿಟ್ಟು ಹೋಗುತ್ತೇನೆ. ನೀನು ಆಕೆಯನ್ನು ನೋಡಿ ಮನೆಗೆ ಹೋಗಬೇಕು."

ರಾಜ ಆಗಲೆಂದು ಹೇಳಲೇಬೇಕಾಯಿತು.

ಸೀತಾರಾಮು ಹೋದಮೇಲೆ ಅವನನ್ನು ಹೋಗಗೊಡಬಾರದಾಗಿತ್ತೆಂದು ರಾಜ ಚಿಂತಿಸಿದ. ತನ್ನ ಮನಸ್ಸಿನಲ್ಲಿ ಸುಪ್ತವಾಗಿದ್ದ ಆಸೆಯನ್ನು ಕೆರಳಿಸಿ ಅವನು ಹೋಗಿಬಿಟ್ಟಿದ್ದ. 'ನೀನು ಮಾಡುತ್ತಿರುವುದು ಆತ್ಮವಂಚನೆ' ಎಂದು ಅವನು ಹೇಳಿದ ಮಾತು ಮನಸ್ಸನ್ನು ಚುಚ್ಚಿತ್ತು. 'ಅವನು

ಹೇಳಿದ್ದು ಸತ್ಯ—ಸತ್ಯವಾಡಿದನೆಂದು ಅವನ ಮೇಲೆ ಕೋಪಿಸಿಕೊಳ್ಳಲೇ.' ತನ್ನ ಹೇಡಿತನವನ್ನು ನೆನೆದು ತನಗೆ ನಾಚಿಕೆಯಾಯಿತು. 'ಅವಳನ್ನು ಮನಸ್ಸಿನಿಂದ ಪೂರ್ಣವಾಗಿ ದೂರಮಾಡಿದ್ದೇನೆ. ಇನ್ನು ನೋಡಿದರೇನು, ಮಾತನಾಡಿದರೇನು? ಇನ್ನು ಅವಳು ನನ್ನ ನೀಲನಲ್ಲ—ಯಾವಳೋ ಪರಿಚಯಸ್ಥಳು. ನನ್ನ ಜೀವನ ಅವಳ ಹೃದಯವನ್ನು ದಾಟಿ ಹೊರಗೆ ಹೋಗಿದೆ—ಇನ್ನು ಏತರ ಶಂಕೆ—ಏತರ ಭಯ' ಎಂಬ ಧೈರ್ಯವಾಯಿತು.

ರಾಜನಿಗೆ ನೀಲನನ್ನೊಮ್ಮೆ— ಕೊನೆಯ ಸಲ— ನೋಡಬೇಕೆಂಬ ಕುತೂಹಲವೂ ಇತ್ತು. ಅಂದಿನ ಘಟನೆಯಲ್ಲಿ ಅವಳ ಪಾತ್ರವನ್ನು ಸರಿಯಾಗರಿತುಕೊಳ್ಳಬೇಕೆಂಬ ಚಪಲ. ಅಂತೂ ಇಂತೂ ಕಾಲೆಳೆದುಕೊಂಡು ಬಂದು ಅವನನ್ನು ನೀಲನ ಮನೆಯ ಹತ್ತಿರ ಬಿಟ್ಟಿತು.

ರಾಜ ಹೋಗಿ ತೊಟ್ಟಿಯಲ್ಲಿ ಕುಳಿತ. ಅವನನ್ನು ಕಂಡ ಗಂಗಾಧರ ಅಕ್ಕನಿಗೆ ಸುದ್ದಿಯನ್ನು ಮುಟ್ಟಿಸಿದ. ನೀಲಾ ಇದ್ದಂತೆಯೇ ಹೊರಗೆ ಬಂದಳು. ಎಂದಿನ ಓರಣವಿಲ್ಲ, ಅಲಂಕಾರವಿಲ್ಲ, ತಲೆಗೆ ಒಂದು ಚೂರು ಹೂವು ಕೂಡಾ ಇಲ್ಲ. ಕೆದರಿದ್ದ ತಲೆ ಬಾಚಣಿಗೆಯನ್ನೂ ಕಂಡಿರಲಿಲ್ಲ. ವಿನಯದಿಂದ "ಒಳಗೆ ಬನ್ನಿ" ಎಂದು ಕರೆದಳು.

"ನಾನು ಬೇಗ ಹೋಗಬೇಕಾಗಿದೆ. ಇಲ್ಲೇ ಕುಳಿತು ಮಾತಾಡೋಣ."

"ದಯವಿಟ್ಟು ಬನ್ನಿ" ಎಂದಳು. ಅವಳ ದೈನ್ಯ, ಅವಳಿದ್ದ ಸ್ಥಿತಿ ಅವನ ಕಾಠಿಣ್ಯವನ್ನು ಕರಗಿಸಿತು. ಒಳಗೆ ಹೋಗಿ ಸೋಫಾದ ಮೇಲೆ ಕುಳಿತ. ಸ್ವಲ್ಪ ಹೊತ್ತು ನೀರವ. ಒಬ್ಬರನ್ನೊಬ್ಬರು ಕಂಡು ಮಾತನಾಡ ಬೇಕೆಂದು ಹಾರೈಸುತ್ತಿದ್ದ ಎರಡು ಜೀವಗಳೂ ಎದುರು ಬದುರು ನಿಂತಾಗ ಮಾತಿಲ್ಲದೆ ಮೌನವ್ರತವನ್ನು ಧರಿಸಿದವು. ರಾಜನೇ ಮಾತು ತೆಗೆದ; "ಏಕೆ ಹೀಗಿದ್ದೀ! ಮೈಯಲ್ಲಿ ಸರಿಯಿಲ್ಲವೇ?"

"ಇಲ್ಲದೆ ಏನು?"

"ನಿನ್ನನ್ನು ನೋಡಿದರೆ ತಿಂಗಳುಗಟ್ಟಲೆ ಕಾಹಿಲೆಬಿದ್ದು ಎದ್ದುಬಂದ ಹಾಗಿದೆ."

"ನೀವು ಚೆನ್ನಾಗಿದ್ದೀರಾ? ಏಕಿಷ್ಟು ಬಡವಾಗಿದ್ದೀರಿ?"

ಇಬ್ಬರೂ ತಾವು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ನಿರೀಕ್ಷಿಸಲಿಲ್ಲ. ಉತ್ತರವೇನೆಂದು ಅವರಿಗೆ ತಿಳಿದೇ ಇತ್ತು.

"ಒಂದು ಸಲವಾದರೂ ಈ ಕಡೆ ಬರುವುದಕ್ಕೆ ಪುರಸತ್ತಾಗಲಿಲ್ಲವೇ?"

"ಪುರಸತ್ತಿಗೇನು ಕೊರತೆ. ಮನಸ್ಸಾಗಲಿಲ್ಲ."

"ನಾನು ಮಾಡಿದ ಅಂತಹ ಅಪರಾಧವೇನು?"

"ಅಪರಾಧವೇ?—ಏನೆಂದು ಹೇಳಲಿ."

"ನಾನು ಅಪರಾಧಿನಿ ನಿಜ. ಆದರೆ ನನ್ನ ಹೇಳಿಕೆಗೂ ಒಂದವಕಾಶ ಬೇಡವೇ?"

"ಅದಕ್ಕೆ ಬಂದಿದ್ದೇನಲ್ಲಾ."

"ನಾನು ಸೀತಾರಾಮಯ್ಯಂಗಾರ್ಯರ ಕಾಲುಹಿಡಿದು ಬೇಡಿಕೊಳ್ಳುವ ಹೊತ್ತಿಗೆ."

"ಇರಬಹುದು. ನಾನೂ ಬಂದದ್ದೂ ಅವನಿಗೋಸ್ಕರವೇ?"

"ನನ್ನಗೋಸ್ಕರವಲ್ಲ."

"ಅಲ್ಲ."

"ಹೂವಿನಂತಹ ನಿಮ್ಮ ಮನಸ್ಸು ಎಷ್ಟು ಕಠಿಣವಾಗಿ ಬಿಟ್ಟಿದೆ. ನನ್ನ ಸಲುವಾಗಿಯಲ್ಲ. ನಿಮ್ಮ ಸಲುವಾಗಿ ಬೇಡಿಕೊಳ್ಳುತ್ತೇನೆ ಮನಸ್ಸನ್ನು ಹೀಗೆ ಕಲ್ಲುಮಾಡಿಕೊಳ್ಳಬೇಡಿ."

"ಅದರ ಯೋಗಕ್ಷೇಮ ನಿನಗೆ ಸಂಬಂಧಿಸಿದ್ದಲ್ಲ."

"ಹಾಗೆ ಹೇಳುವವರು ಯಾರು?"

"ನಾನು."

"ನಿಮಗೆ ಹೇಳುವ ಅಧಿಕಾರವಿಲ್ಲ. ನನ್ನ ಭಕ್ತಿ, ಪ್ರೇಮವನ್ನು ಯಾರೂ ಅಳಿಸಲಾರರು."

"ಇಂತಹ ಜ್ಞಾನಿ ನೀನು, ನನಗೇಕೆ ಮೋಸಮಾಡಿದೆ. ನಾನು ನಿನಗೆ ಮಾಡಿದ ಅನ್ಯಾಯವಾದರೂ ಏನು?"

"ನಾನು ಮಾಡಿದ ಮೋಸವೇನು? ನನ್ನ ಸಂಸಾರ ಬೇರೊಬ್ಬರು ನಡಸುತ್ತಿದ್ದಾರೆಂದು ನಾನು ಹೇಳಿರಲಿಲ್ಲವೇ. ಎಲ್ಲವನ್ನೂ ಬಿಟ್ಟು ನಿಮ್ಮ ಜತೆಯಲ್ಲಿ ಬರಲು ನಾನು ಸಿದ್ಧಳಾಗಿರಲಿಲ್ಲವೇ?"

" ಆ ಧಣಿ ಯಾರೆಂದು ಏಕೆ ಹೇಳಲಿಲ್ಲ? "

" ಹೆಣ್ಣು, ಸೂಳೆಯಾದರೂ ನಾಚಿಕೆ ಆ ಜನ್ಮದ ಹುಟ್ಟುಗುಣ. "

" ತಂದೆ ಮಕ್ಕಳ ಸಂಬಂಧಮಾಡಬಾರದೆಂಬ ನೀತಿ ಹುಟ್ಟುಗುಣ ವಲ್ಲವೋ ? "

" ತಂದೆ ಮಕ್ಕಳೆಂದು ನನಗೆ ಗೊತ್ತಿರಲಿಲ್ಲ. ಗೊತ್ತಿದ್ದರೆ ಈ ಪ್ರಸಂಗ ಇಷ್ಟು ದೂರ ಬೆಳೆಯುತ್ತಲೇ ಇರಲಿಲ್ಲ. "

" ಸತ್ಯವನ್ನು ಹೇಳುತ್ತಿದ್ದೀಯಾ ? "

" ಆಹೊತ್ತು ನೀವು ಒಬ್ಬರನ್ನೊಬ್ಬರು ಸಂಧಿಸಿದಾಗಲೇ ನನಗೆ ಗೊತ್ತಾದದ್ದು. ಇದು ಸತ್ಯ—ಈಶ್ವರ ಸತ್ಯವಾಗಿಯೂ ನಿಜ. "

ಕಣ್ಣೀರು ತುಂಬಿದ ಮುಗ್ಧೆಯನ್ನು ರಾಜ ನೋಡಿದ. ಕಾಠಿಣ್ಯ ಕನಿಕರಕ್ಕೆ ಎಡೆಗೊಟ್ಟಿತು. ಅವಳೂ ನೊಂದಿದ್ದಳು. ಚಿಂತಾತಪದಲ್ಲಿ ಬೆಂದು ಪರಿಶುದ್ಧಳಾಗಿದ್ದಳು. ತನ್ನ ಕೋಪ, ಅನಾದರಣೆ, ಪರಶುವಾಕ್ಯಗಳನ್ನು ಅಸೀಮಸಹನೆಯಿಂದ ಸಹಿಸಿದ್ದಳು. ತನ್ನಿಂದಾದ ಅನ್ಯಾಯಕ್ಕೆ ಅನನ್ಯವಾದ ರೂಪಯೌವನಗಳನ್ನು ಬಲಿದಾನವಾಗರ್ಪಿಸಿದ್ದಳು. ರಾಜನಿಗೆ ಕಣ್ಣು ತೆರೆದಂತಾಯಿತು. ಕರುಣೆಯಿಂದ " ನೀಲಾ " ಎಂದನು.

ಅಲ್ಲಿಯವರೆಗೆ ತಡೆದಿದ್ದ ದುಃಖಸೇತು ಒಡೆದು ಹೋಯಿತು. ನೀಲಾ ತನ್ನ ದುಃಖವನ್ನು ಕಣ್ಣೀರಿನಿಂದ ಹೊರಚೆಲ್ಲಿಬಿಟ್ಟಳು. ಅವಳ ಮನಸ್ಸು ತುಸು ಹಗುರವಾಯಿತು.

" ನನ್ನನ್ನು ಕ್ಷಮಿಸುವಿರಾ ದೊರೆ ? " ಎಂದು ರಾಜನ ಪಾದಗಳನ್ನು ಬಿಗಿದಪ್ಪಿದಳು. ರಾಜ ಸಂತೈಸುತ್ತಾ ಹಿಡಿದೆತ್ತಿ ಕುಳ್ಳಿರಿಸಿದ.

" ನಾನು ನಿನ್ನ ಕ್ಷಮೆಯನ್ನು ಯಾಚಿಸಬೇಕಾಗಿದೆ ನೀಲಾ. ತಪ್ಪು ತಿಳಿದುಕೊಂಡು ನಿನ್ನನ್ನು ಅಪಾರ ದುಃಖಕ್ಕೆ ಗುರಿಮಾಡಿದೆ. "

" ಹೋಗಲಿ. ಆದದ್ದನ್ನು ಚಿಂತಿಸಿ ಫಲವೇನು ? "

" ಇಂದಿನಿಂದ ನಮ್ಮ ಸಂಬಂಧ ಹೊಸರೂಪವನ್ನು ತಾಳಬೇಕು. "

" ಅದನ್ನು ನಾನು ಮೊದಲೇ ನಿಶ್ಚಯಿಸಿದ್ದೇನೆ. "

" ನಿನ್ನ ಗುಣ, ರೂಪಗಳಿಗೆ ಅನುರೂಪನಾದ ನಲ್ಲ ನಿನಗೆ ದೊರೆಯಲಿ"

ನೀಲಾ ವಿಕಟವಾಗಿ ನಕ್ಕಳು.

"ಆ ಜೀವನ ನನಗೆ ಎಂದೋ ಮುಗಿದು ಹೋಯಿತು."

"ಹಾಗೆಂದರೆ........?"

"ನನ್ನ ಜೀವಮಾನದಲ್ಲಿ ನಾನು ಮನಸಾರೆ ಒಪ್ಪಿ, ಮೆಚ್ಚಿ, ಪ್ರೀತಿಸಿದ್ದು ನಿಮ್ಮನ್ನು. ನಾಲ್ಕು ದಿನವಾದರೂ ಈ ದೇಹವನ್ನು ನಿಮಗೆ ಬಡಿಸಿದ್ದೇನೆ. ನಾನು ಎಂದಿಗೂ ನಿಮ್ಮವಳು—ಇದು ನಿಮಗೆ ಮೀಸಲಾದ ದೇಹ. ಪರ ಸೇವೆಯ ಉದ್ಯಮಕ್ಕೆ ಎಂದೋ ತಿಲತರ್ಪಣವನ್ನು ಕೊಟ್ಟುಬಿಟ್ಟೆ."

"ಮುಂದೆ?"

"ನಿಮ್ಮ ಆಶೀರ್ವಾದವೊಂದಿದ್ದರೆ ನಾಕು. ಕಲ್ಲಿನಲ್ಲಿ ಕಲೆಯನ್ನು ಕೊನರಿಸಿದಿರಿ. ನಿಮ್ಮ ಕೃಪೆಯಿಂದ ಕಲಾಸೇವೆಯಲ್ಲಿ ಈ ಬಾಳನ್ನು ಸವೆಸ ಬೇಕೆಂದಿದ್ದೇನೆ. ನಾಲ್ಕು ಜನಕ್ಕೆ ದೇಹವನ್ನು ನೀಡಿ ದಣಿಸುತ್ತಿದ್ದೆ; ಇನ್ನು ಮೇಲೆ ಹತ್ತು ಜನಕ್ಕೆ ಕಲೆಯನ್ನು ನೀಡಿ ತಣಿಸುತ್ತೇನೆ."

ಅದೇ ಪರಮ ಶ್ರೇಯಸ್ಸಿನ ದಾರಿ."

"ನಿಮ್ಮನ್ನು ಒಮ್ಮೆ ಕಂಡು, ನನ್ನ ಮನಸ್ಸನ್ನು ತೋಡಿಕೊಳ್ಳ ಬೇಕೆಂದಿದ್ದೆ. ಆ ಆಸೆ ಇಂದು ಸಾರ್ಥಕವಾಯಿತು. ಇನ್ನು ಯಾವ ರೀತಿ ಯಲ್ಲಿಯೂ ನಿಮ್ಮನ್ನು ತೊಂದರೆಗೊಳಿಸುವುದಿಲ್ಲ. ನಾನೂ ನನ್ನ ಬಡ ಗುಡಿಸಲೂ ಯಾವಾಗಲೂ ನಿಮ್ಮ ಸೇವೆಗೆ ಸಿದ್ಧವಾಗಿರುತ್ತದೆ. ಸ್ವಾಮಿಗೆ ಮನಸ್ಸು ಬಂದಾಗ ದಯಮಾಡಿಸಬಹುದು."

"ನೀಲಾ..........."

ರಾಜನಿಗೆ ಮಾತು ಹೊರಡದಾಯಿತು. ದಿವ್ಯ ಹೃದಯವೊಂದರಲ್ಲಿ ಬೆಳಗುತ್ತಿದ್ದ ಮಹಾಜ್ಯೋತಿಯನ್ನು ಕಂಡಂತಾಯಿತು. ಅದರ ಪ್ರಭೆ ಅವನ ಕಣ್ಣು ಕೋರಯಿಸಿತು.

"ಇನ್ನೊಂದು ವಿಷಯ........ಕೇಳಬಹುದೇ?"

"ಕೇಳು."

"ಅಮ್ಮಾವರು ಚೆನ್ನಾಗಿದ್ದಾರೆಯೇ?"

"ಇದ್ದಾಳೆ."

"ಅವರು ಪ್ರಸವಿಸಿದ ಮೇಲೆ ನನಗೊಂದು ಮಾತು ತಿಳಿಸಬೇಕು. ದೂರದಲ್ಲಿಯೇ ನಿಂತುನೋಡಿ ಹೋಗುತ್ತೇನೆ. ಅಷ್ಟಕ್ಕೆ ಅವಕಾಶಕೊಡಬೇಕು."

"ಆಗಲಿ."

"ಈಗ ಏನು ಮಾಡುತ್ತಿರುವಿರಿ?"

"ಒಂದು ಕೆಲಸಕ್ಕೆ ಸೇರಿದ್ದೇನೆ."

"ನಾಟಕದ ವಿಷಯ."

"ಅವಳು ಮೈಕಳೆದ ಮೇಲೆ ಅದರ ಚಿಂತೆ. ಎಂದಿದ್ದರೂ ನನ್ನ ಬಾಳು ಆ ಗಂಗೆಯನ್ನೇ ಸೇರಬೇಕು."

"ಈಗ ನಾನು ಸುಖಿ."

ರಾಜ ಹೊರಡುವುದಕ್ಕೆ ಎದ್ದು ನಿಂತ. "ನಾನು ಬರುತ್ತೇನೆ" ಎಂದ. ನೀಲಾ ತಲೆಯಲ್ಲಾಡಿಸಿದಳು.

೧೭

ರಾಜನ ಬಳಲಿದ್ದ ಬಾಳುವೆಗೆ ಹೊಸ ಜೀವ ಬಂದಂತಾಯಿತು. ನಿರುತ್ಸಾಹ ನೀಗಿತು. ನೀರಸವಾದ ಕಛೇರಿಯ ಕೆಲಸದಲ್ಲಿಯೂ ಹುಮ್ಮಸ ಹುಟ್ಟಿತು. ಕಛೇರಿಯ ವ್ಯವಹಾರದ ಸೂಕ್ಷ್ಮ ತತ್ವಗಳನ್ನೆಲ್ಲಾ ಕೆಲವೇ ದಿವಸಗಳಲ್ಲಿ ಕರಗತಮಾಡಿಕೊಂಡನು. ಮೊದಲೇ ವಿಶ್ವಾಸಿಯಾಗಿದ್ದ ಅಧಿಕಾರಿ ಅವನ ದಕ್ಷತೆಯನ್ನು ನೋಡಿ ಮತ್ತಷ್ಟು ವಿಶ್ವಾಸ ತಾಳಿದನು.

ಗುರುಗಳನ್ನು ನಿರ್ಲಕ್ಷಿಸಿದ್ದುದಕ್ಕೆ ರಾಜನಿಗೆ ತುಂಬ ವ್ಯಸನವಾಯಿತು ಮತ್ತೆ ಅವರ ಮನೆಗೆ ಎಂದಿನಂತೆ ಹೋಗಲಾರಂಭಿಸಿದ. ಪಾಠವೂ ಹೊಸ ಹುರುಪಿನಿಂದ ಕ್ರಮವಾಗಿ ಸಾಗಲಾರಂಭವಾಯಿತು.

ರಾಜನಲ್ಲಾಗಿದ್ದ ಮಾರ್ಪಾಟನ್ನು ಕಂಡು ಅವನ ಗೆಳೆಯರೂ ಸಂತೋಷಿಸಿದರು. ಅವರೊಂದಿಗೆ ಎಂದಿನಂತೆ ಬೆರೆತು ಸುಖದಿಂದಿರುತ್ತಿದ್ದ. ಗೆಳೆಯರ ಸಂತೋಷಕ್ಕೆ ಹೆಚ್ಚಿನದೊಂದು ಪ್ರಸಂಗವೂ ಕೂಡಿಬಂತು. ದೇವದಾಸ್ ನಿರೀಕ್ಷಿಸುತ್ತಿದ್ದಂತೆ ಅವನಿಗೆ ಪ್ರೊಬೆಷನರಿ ಸಿಕ್ಕಿತ್ತು. ದೊಡ್ಡ ಕೆಲಸ, ಕೈತುಂಬ ಸಂಬಳ. ಅವನನ್ನು ಅಭಿನಂದಿಸುತ್ತಾ ರಾಜ ಚೇಷ್ಟೆಮಾಡಿದ.

"ಇನ್ನೇನಪ್ಪಾ, ನಾಲ್ಕೈದು ವರ್ಷಗಳಲ್ಲಿ ಡೆಪ್ಯುಟಿ ಕಮೀಷನರ್ ಆಗುತ್ತೀ—ಆ ಮೇಲೆ ಜನರಲ್ ಸೆಕ್ರಟರಿ—ಚೀಫ್ ಸೆಕ್ರಟರಿ—ರೆವಿನ್ಯೂ ಕಮೀಷನರ್—ಕೌನ್ಸಿಲ್ ಮೆಂಬರ್—ಕೊನೆಗೆ ದಿವಾನಗಿರಿ ಎಲ್ಲಾ ಮಾಡುತ್ತೀ. ಬಡಗೆಳೆಯರನ್ನು ಮರೆಯಬೇಡಪ್ಪ. ನಿನ್ನ ದವಲತ್ತಿನಲ್ಲಿ ನಮಗೆಲ್ಲಾ ಒಂದೊಂದು ಒಳ್ಳೆಯ ಕೆಲಸಮಾಡಿಸಿಕೊಡು."

"ಮನೆಯ ಮಗ ಊರಿಗೆ ಎಷ್ಟು ದೊಡ್ಡವನಾದರೂ ತಾಯಿಗೆ 'ಮಗು' ವೇ ಅಲ್ಲವೇ ಹಾಗೆ ನಿಮಗೆ ನಾನು ಯಾವಾಗಲೂ ಗೆಳೆಯ. ಸ್ನೇಹದ ಮುಂದೆ ಅಧಿಕಾರ ಪದವಿಗಳೇನು?"

"ಎಲ್ಲಾರೂ ಹೀಗೆ ಅನ್ನುತ್ತಿರುತ್ತಾರೆ. ನಾಲ್ಕು ವರ್ಷ ಅಧಿಕಾರ ಅನುಭವಿಸಿದರೆಂದರೆ ಅವರ ಸ್ವರೂಪವೇ ಬದಲಾಯಿಸಿ ಹೋಗುತ್ತದೆ" ಎಂದು ಸೀತಾರಾಮು ಟೀಕಿಸಿದ.

"ಎಲ್ಲಾರ ಹಾಗೆ ನಮ್ಮ ದೇವದಾಸ್ ಆಗುತ್ತಾನೇನೊ ಸೀತಾರಾಮು" ತಿರುಮಲ ದೇವದಾಸನ ವಕೀಲಿ ವಹಿಸಿ ಮಾತನಾಡಿದ.

"ಹೇಳೋಕಿಲ್ಲಪ್ಪಾ, ಕಾಲ ಕೆಟ್ಟಕಾಲ" ಎಂದು ಅಚ್ಯುತ ಅಡ್ಡ ಗೋಡೆಯ ಮೇಲೆ ದೀಪವಿಟ್ಟ ಹಾಗೆ ನುಡಿದ.

"ಸುಮ್ಮನೆ ಅವನನ್ನು ಯಾಕೋ ಗೋಳು ಹುಯ್ದುಕೊಳ್ಳುತ್ತೀರಿ. ದೇವದಾಸ ಎಂದಿಗೂ ನಮ್ಮನ್ನು ಮರೆಯುವುದಿಲ್ಲ" ಎಂದು ರಾಜ ಅಂತಃ ಕರಣದಿಂದ ಹೇಳಿದ ಮಾತನ್ನು ಗೆಳೆಯರು ಮರುಮಾತನಾಡದೆ ಒಪ್ಪಿ ಕೊಂಡರು.

ಹೊರಗೆ ಒಂದು ಬಗೆಯ ಶಾಂತಿತೋರಿ, ಜೀವನ ಒಂದು ವ್ಯವಸ್ಥೆ ಬಂದಂತೆ ಕಾಣುತ್ತಿದ್ದರೂ ರಾಜನಿಗೆ ಒಳಗೆ ಒಂದು ದೊಡ್ಡ ದುಃಖ ಕಾಡು ತ್ತಿತ್ತು. ಸೀತಮ್ಮನ ಆರೋಗ್ಯ ದಿನದಿನಕ್ಕೆ ಚಿಂತಾಜನಕವಾಗುತ್ತಿತ್ತು. ನೋವು ಬಂದು ಬಂದು ನಿಲ್ಲುತ್ತಿತ್ತು. ಲೇಡಿ ಡಾಕ್ಟರನ್ನು ಕರೆದು ತಂದು ತೋರಿಸಿದ್ದಾಯಿತು. ಅವರು "ಇದು ಹೀಗೆಯೇ?" ಎಂದು ಸಮಾಧಾನ ಹೇಳಿ ಔಷಧ ಕೊಟ್ಟು ಹೋಗುತ್ತಿದ್ದರು.

ಒಂದು ದಿನ ರಾಜ ಕಛೇರಿಯಿಂದ ಬರುವ ಹೊತ್ತಿಗೆ ಸೀತಮ್ಮ ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಳು. ಮೈಯಲ್ಲಿ ಜ್ವರ ಸುಡುತ್ತಿತ್ತು. ಜ್ವರದ ತಾಪದಲ್ಲಿ ಒಮ್ಮೊಮ್ಮೆ ಹುಚ್ಚು ಹುಚ್ಚಾಗಿ ಮಾತನಾಡುತ್ತಿದ್ದಳು. ರಾಜನಿಗೆ ದಿಕ್ಕು ತೋರದಂತಾಯಿತು. ಹೆಂಡತಿಯ ಬಳಿ ಹೋಗಿ ಕುಳಿತ. ಗಂಡನನ್ನು ದಿಟ್ಟಿಸಿ ನೋಡಿದಳು. ಮಾತನಾಡಬೇಕೆಂದು ಪ್ರಯತ್ನಿಸಿದಳು—ಮಾತು ಹೊರಡಲಿಲ್ಲ. ಕಣ್ಣುಗಳಲ್ಲಿ ಕಾಂತಿಹೀನವಾದ ಛಾಯೆಯೊಂದು ಕೂಡಿಕೊಂಡಿತ್ತು. ರಾಜನನ್ನು ಭಯ ಆವರಿಸಿತು. ಕೂಡಲೆ ಹೋಗಿ ಡಾಕ್ಟರನ್ನು ಕರೆತಂದ. ಅವರು ರೋಗಿಯನ್ನು ಪರೀಕ್ಷಿಸಿ, "ಆಸ್ಪತ್ರೆಗೆ ಕರೆದುಕೊಂಡು ಹೋಗಿ ಸೇರಿಸಿ. ಬಹಳ ಜೋಕೆಯಿಂದ ಔಷಧಿ ಪಥ್ಯವಾಗಬೇಕಾಗಿದೆ" ಎಂದು ಹೇಳಿದರು. ರಾಜನ ಜಂಘಾಬಲವೇ ಉಡುಗಿಹೋಯಿತು.

ಆಸ್ಪತ್ರೆಗೆ ಕರೆದುಕೊಂಡು ಹೋಗಿ ಸೇರಿಸಿದ. ಡಾಕ್ಟರು ಪರೀಕ್ಷಿಸಿದರು. ರಾಜ ಅತಿದೀನನಾಗಿ "ಪ್ರಾಣಕ್ಕೆ ಭಯವಿಲ್ಲವೇ?" ಎಂದ.

"ಭಯವಿಲ್ಲವೆಂದು ಕಾಣುತ್ತದೆ" ಎಂದು ಹೇಳಿದರು.

"ನಾನು ಇಲ್ಲೇ ಇರಬಹುದೇ?"

"ಇದು ಹೆಂಗಸರ ಆಸ್ಪತ್ರೆ. ನೀವು ಇರಲು ಹೇಗೆ ಸಾಧ್ಯ. ಈಕೆಗೆ ಹೆಂಗಸರು ಯಾರೂ ದಿಕ್ಕಿಲ್ಲವೇ?"

"ಇಲ್ಲ"

"ಹಾಗಾದರೆ ಸ್ಪೆಷಲ್‌ವಾರ್ಡಿಗೆ ಬದಲಾಯಿಸಿದರೆ ನೀವು ಇರಬಹುದು."

"ಹಾಗೆಯೇ ಮಾಡಿ."

ವಾರ್ಡಿನ ಹೊರಗೆ ಹಾಕಿದ್ದ ಬೆಂಚಿನ ಮೇಲೆ ಕುಳಿತು ಮೇಲಿಂದ ಮೇಲೆ ಹೋಗಿ ನೋಡಿ ಬರುತ್ತಿದ್ದ. ನರ್ಸು ರೋಗಿಯ ಬಳಿಯೇ ಇದ್ದು ಕಾಲಕಾಲಕ್ಕೆ ಔಷಧ ಕೊಡುತ್ತಿದ್ದಳು. ಬೆಳಗಾಯಿತು. ಡಾಕ್ಟರು ಇಂಜಕ್ಷನ್ನಿಗೆ ಕೆಲವು ಔಷಧಗಳು ಬೇಕೆಂದು ಒಂದು ಪಟ್ಟಿಕೊಟ್ಟರು. ಅದನ್ನು ತರುವುದಕ್ಕೆ ಹೊರಟು, ದಾರಿಯಲ್ಲಿ ಸೀತಾರಾಮು ಮನೆಗೆ ಹೋಗಿ ಅವನ ಕೈಯಲ್ಲಿ ಕಛೇರಿಗೊಂದು ಕಾಗದ ಬರೆದು ಕಳುಹಿಸಿದ.

ಔಷಧ ತಂದು ಡಾಕ್ಟರ ಕೈಯಲ್ಲಿತ್ತು. ಅವರು ಅವನ ಸ್ಥಿತಿಯನ್ನು ನೋಡಿ "ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ನಮ್ಮ ಕೈಯಲ್ಲಾಗುವದೆಲ್ಲ ವನ್ನೂ ನಾವು ಮಾಡುತ್ತೇವೆ" ಎಂದರು.

"ನನ್ನ ವಿಶ್ರಾಂತಿ ಹಾಗಿರಲಿ. ಆಕೆಯ ಪ್ರಾಣ ಉಳಿಸಿ. ಜ್ವರ ಕಮ್ಮಿಯಾಗಿದೆಯೇ?"

"ಒಮ್ಮೆಲೇ ಇಳಿದುಬಿಟ್ಟದೆ."

"ಸದ್ಯಃ"

"ಹಾಗೆ ಒಮ್ಮೆಲೇ ಇಳಿಯಬಾರದು." ಎಂದು ಹೇಳಿ ಡಾಕ್ಟರು ಹೊರಟುಹೋದರು. ವಿಧಿ ತನ್ನೊಂದಿಗಾಡುತ್ತಿದ್ದ ಚಲ್ಲಾಟವನ್ನು ಕಂಡು ಬೆರಗಾದ.

ಸಂಜೆಯ ಹೊತ್ತಿಗೆ ಮತ್ತೆ ಮೊದಲಿನ ಹಾಗೆ ಜ್ವರ ಏರಿತು. ಕಾಲೇಜು ಮುಗಿಸಿಕೊಂಡು ಸೀತಾರಾಮು ಬಂದ. ಅವನನ್ನು ಕಂಡು ಗೋಳೋ ಎಂದು ಮಕ್ಕಳಂತೆ ಅತ್ತುಬಿಟ್ಟ. ನರ್ಸ್ ಬಂದು "ನಿಮ್ಮನ್ನು ನೋಡಬೇಕೆಂದು ಬಯಸುತ್ತಾರೆ" ಎಂದು ಕರೆದಳು.

ಜ್ವರ ಸುಡುತಿತ್ತು. ಸೀತಮ್ಮ ಗಂಡನ ಕೈಹಿಡಿದಳು. ಕಷ್ಟದಿಂದ ಮಾತನಾಡತೊಡಗಿದಳು.

"ನನ್ನನ್ನು ಕ್ಷಮಿಸಿ"

"ನೀನೇನು ತಪ್ಪುಮಾಡಿದೆ ಕ್ಷಮಿಸುವುದಕ್ಕೆ."

"ಊಟ ಮಾಡಿದಿರಾ?"

"ಹೂ!"

"ಎಷ್ಟು ಕಂಗೆಟ್ಟಿರುವಿರಿ?"

"ಏನೂ ಇಲ್ಲ. ಆ ಚಿಂತೆಯನ್ನೆಲ್ಲಾ ಬಿಡು. ಮೊದಲು ನೀನು ಹುಷಾರಾಗು."

"ಮತ್ತೆ ನನ್ನನ್ನು ಮನೆಗೆ ಕರೆದುಕೊಂಡು ಹೋಗುತ್ತೀರಾ?"

"ಏಕೆ ಹಾಗೆ ಕೇಳುವೆ ಸೀತಾ:"

" ನನಗೇನೋ ಭಯವಾಗುತ್ತಿದೆಯಲ್ಲಾ. "

" ನಾನಿರುವಾಗ ಭಯವೇನು ? "

" ನನಗೆ — ನಿಮ್ಮನ್ನು ಬಿಟ್ಟು ಹೋಗಲು ಇಚ್ಛೆಯಿಲ್ಲ. "

" ಇದೆಲ್ಲಾ ಏನು ಮಾತು ಸೀತಾ. ಎಲ್ಲಿಗೆ ಹೋಗುವುದು. ನಾಲ್ಕು ದಿವಸ ಕಳೆದರೆ ಗುಣವಾಗುತ್ತದೆ. ಮನೆಗೆ ಹೋಗೋಣ. "

ಸೀತಮ್ಮ ವಿಕಟವಾಗಿ ನಕ್ಕಳು. ನರ್ಸ ಬಂದು " ಹೆಚ್ಚು ಮಾತ ನಾಡಿಸಬೇಡಿ " ಎಂದು ಎಚ್ಚರವಿತ್ತಳು. ಸೀತಮ್ಮನಿಗೆ ನಿದ್ದೆಯ ಝೊಂಪು ಹತ್ತಿದ ಹಾಗಾಯಿತು. ಸೀತಾರಾಮು ಬಿಡದೆ ಅವನನ್ನು ಜತೆಯಲ್ಲಿ ಕರೆ ದೊಯ್ದ. ಸೀತಮ್ಮ ಆಡಿದ ಮಾತುಗಳು ರಾಜನ ಹೃದಯದಲ್ಲಿ ಕೊರೆಯು ತ್ತಿದ್ದವು. ಸೀತಾರಾಮು ಎಷ್ಟು ಬಗೆಯಲ್ಲಿ ಧೈರ್ಯ ಹೇಳಿದರೂ ಮನಸ್ಸಿಗೆ ಶಾಂತಿ ಬರಲೊಲ್ಲದು. " ಮಹಾಶಿಕ್ಷೆಯೂ ನನಗೆ ಕಾದಿದೆಯೇನೋ " ಎಂದ.

" ಶಿಕ್ಷೆಯೂ ಅಲ್ಲ, ಏನೂ ಅಲ್ಲ. ನೀನು ಸುಮ್ಮನೆ ಅಧೈರ್ಯಪಟ್ಟು ಕೊಳ್ಳುತ್ತಿರುವೆ.

ದೇವದಾಸ, ತಿರುಮಲನೂ ಬಂದು ಕೂಡಿದರು. ಎಲ್ಲರೂ ಬಲವಂತ ಮಾಡಿ ರಾಜನಿಗೆ ಒಂದಿಷ್ಟು ತಿಂಡಿ ಕಾಫಿಯನ್ನು ಗಿಡಿದರು. ಗಂಟೆ ಎಂಟಾ ಗುತ್ತ ಬಂದಿತ್ತು. ರಾಜ ಮತ್ತೆ ಆಸ್ಪತ್ರೆಗೆ ಹೋದ. ವಾರ್ಡಿನಲ್ಲಿ ಸೀತಮ್ಮ ಕಾಣಲಿಲ್ಲ. ಮಂಚ ಖಾಲಿಯಾಗಿತ್ತು. ಎದೆ ಗುಂಡಿಗೆ ಹಾರಿಹೋಯಿತು. ನರ್ಸು ಬರುತ್ತಲು ಕೇಳಿದ " ಎಲ್ಲಿ ? "

" ಲೇಬರ್ ರೂಮಿಗೆ ಕರೆದುಕೊಂಡು ಹೋಗಿದ್ದಾರೆ. "

" ನಾನು ನೋಡಬಹುದೇ ? "

" ಅಲ್ಲಿಗೆ ಯಾರನ್ನೂ ಬಿಡುವುದಿಲ್ಲ. "

" ಏನೂ ಭಯವಿಲ್ಲವೇನಮ್ಮ "

" ಯೋಚಿಸಬೇಡಿ. ದೇವರು ಎಲ್ಲಾ ಒಳ್ಳೆಯದು ಮಾಡುತ್ತಾನೆ. "

ಗೆಳೆಯರೂ ಅವನ ಜತೆಯಲ್ಲಿಯೇ ಕುಳಿತರು. ಹತ್ತು ಗಂಟೆ ಹೊಡೆಯಿತು.

" ನೀವು ಮನೆಗಳಿಗೆ ಹೋಗಿ. ನಾನು ಜತೆಯಲ್ಲಿರುತ್ತೇನೆ. " ಎಂದು ಸೀತಾರಾಮು ಹೇಳಿ ದೇವದಾಸ, ತಿರುಮಲ, ಅಚ್ಯುತರನ್ನು ಮನೆಗೆ ಕಳು ಹಿಸಿಕೊಟ್ಟ. ರಾಜ, ನಿಮಿಷ ನಿಮಿಷಕ್ಕೆ ಎದ್ದು ಲೇಬರ್‌ರೂಮಿನತ್ತ ಹೋಗಿ ಬರುತ್ತಿದ್ದ. ಅಲ್ಲಿದ್ದ ನರ್ಸುಗಳು ಗದರಿಸಿ ಕಳುಹಿಸುತ್ತಿದ್ದರು. ಡಾಕ್ಟರು ಹೊರಗೆ ಬರುತ್ತಲು ಅಂಗಲಾಚಿ ಬೇಡಿದ " ಒಮ್ಮೆ ಮುಖದರ್ಶನ ಮಾಡಿಸಿ " ಎಂದು.

ಡಾಕ್ಟರು ಸಾಧ್ಯವಿಲ್ಲವೆಂದು ಹೇಳಿ ಹೊರಟು ಹೋದರು. ನಿಮಿಷ ಗಳು ಯುಗಗಳಂತೆ ಕಳೆಯುತ್ತಿದ್ದವು. ರಾತ್ರಿ ಎರಡು ಗಂಟೆಯಾಯಿತು. ಹೊರಗೆ ಬಂದ ನರ್ಸು " ಇನ್ನೇನು ಡೆಲಿವರಿ ಆಗಿ ಬಿಡತ್ತೆ. ಯೋಚಿಸ ಬೇಡಿ " ಎಂದು ಹೇಳಿದಳು. ಕಾರಿರುಳಿನಲ್ಲಿ ಮಿಂಚಿನ ಹುಳ ಸುಳಿದಂತಾ ಯಿತು. ಮತ್ತೆ ಅರ್ಧ ಗಂಟೆ ಉರುಳಿತು. ರಾಜ, ಉಸಿರು ಬಿಗಿ ಹಿಡಿದು ಕೊಂಡು ಏನು ಸುದ್ದಿ ಬರುವುದೋ ಎಂದು ನಿರೀಕ್ಷಿಸುತ್ತ ಬಾಗಿಲಲ್ಲೇ ಕಾದಿದ್ದ. ಸೀತಾರಾಮು ಅವನನ್ನು ಎಡಬಿಡುತ್ತಿರಲಿಲ್ಲ. ಡಾಕ್ಟರರು ಹೊರಗೆ ಬಂದು ಒಂದು ಸಿಗರೇಟ್ ಹಚ್ಚಿದರು. ರಾಜ ಆತುರದಿಂದ ಕೇಳಿದ " ಏನಾಯಿತು ? "

" ಇನ್ನೂ ತಡ " ಎಂದು ಮುಂದಕ್ಕೆ ಹೋಗಿ ಸೀತಾರಾಮೂಗೆ ಕಣ್ಸನ್ನೆ ಮಾಡಿದರು. ಸೀತಾರಾಮು, ಮೆಲ್ಲನೆ ರಾಜನನ್ನು ಬಿಟ್ಟು ಡಾಕ್ಟರಲ್ಲಿಗೆ ಹೋದ. ಲೇಬರ್ ರೂಮಿಗೆ ದೂರದಲ್ಲಿದ್ದ ಆಫೀಸಿಗೆ ಅವನನ್ನು ಕರೆದು ಕೊಂಡು ಹೋಗಿ ಡಾಕ್ಟರು " ನೀವು ಅವರಿಗೇನಾಗಬೇಕು ? " ಎಂದು ಕೇಳಿದರು.

" ಗೆಳೆಯ. "

" ಅವರನ್ನು ಹೇಗಾದರೂ ಮಾಡಿ ಇಲ್ಲಿಂದ ಕರೆದುಕೊಂಡು ಹೋಗಿ. "

" ಏಕೆ - ಏನಾಯಿತು ? "

" ಏನೂ ಉಳಿದಿಲ್ಲ. ನಮ್ಮ ಪ್ರಯತ್ನ ನಿಷ್ಫಲವಾಯಿತು. ಬೇಬಿ ಹೊಟ್ಟೆಯಲ್ಲಿಯೇ ತೀರಿಕೊಂಡಿತ್ತು. "

" ಏನು ಗತಿ ಡಾಕ್ಟರ್! "

" ನನ್ನ ಕಾರಿದೆ. ಬೇಕಾದರೆ ತೆಗೆದುಕೊಂಡು ಹೋಗಿ — ಬೆಳಿಗ್ಗೆ ಬಂದು ದೇಹ ತೆಗೆದುಕೊಂಡು ಹೋಗಿ. "

ರಾಜನನ್ನು ಒಪ್ಪಿಸುವುದಕ್ಕೆ ಸೀತಾರಾಮು ಕಲಿತ ಬುದ್ಧಿಯನ್ನೆಲ್ಲಾ ಖರ್ಚು ಮಾಡಬೇಕಾಯಿತು.

" ನಾನಿಲ್ಲದಿದ್ದಾಗ ಹೆಚ್ಚು ಕಡಿಮೆಯಾದರೆ ? "

" ಹಾಗಾಗುವುದಿದ್ದರೆ ಡಾಕ್ಟರೇ ಕಾರುಕೊಟ್ಟು ಕಳುಹಿಸುತ್ತಾರೆಯೇ ? "

" ಭಯವಿಲ್ಲವಂತೇನು ? "

" ಇಲ್ಲವಂತೆ " ಎಂದು ಬಹಳ ಧೈರ್ಯಮಾಡಿ ಹೇಳಬೇಕಾಯಿತು.

ರಾಜನನ್ನು ತನ್ನ ಮನೆಗೇ ಕರೆದುಕೊಂಡು ಬಂದ. ರಾತ್ರಿ ಇಬ್ಬರಿಗೂ ನಿದ್ದೆಯಿಲ್ಲ. ರಾಜನ ಹೊಟ್ಟೆಯಲ್ಲಿ ತಳಮಳ. ಎಂದೂ ಅನುಭವಿಸದಿದ್ದಂತಹ ಸಂಕಟ. ತನ್ನ ದುಃಖವನ್ನು ತೋರಗೊಡದೆ ಸೀತಾರಾಮು ವಿಶ್ವಸಾಹಸಮಾಡಿ ಅವನನ್ನು ಸಂತೈಸುತ್ತಿದ್ದ. ಬೆಳಗಾಗುವ ಹೊತ್ತಿಗೆ ರಾಜನಿಗೆ ಸ್ವಲ್ಪ ನಿದ್ರೆ ಹತ್ತಿದಂತಾಯಿತು. ದುಃಖದ ದಾವಾಗ್ನಿಯಲ್ಲಿ ನೊಂದು ಬೆಂದಿದ್ದ ಗೆಳೆಯನ ಅವಸ್ಥೆಯನ್ನು ನೋಡಿ ಸೀತಾರಾಮು ಕರುಳು ಕಿತ್ತು ಬಂತು. ದೇವದಾಸನಿಗೂ, ತಿರುಮಲ ಅಚ್ಯುತರಿಗೂ ಹೇಳಿ ಕಳುಹಿಸಿ ಕರೆಸಿಕೊಂಡು ನಡೆದಿದ್ದುದನ್ನು ಅವರಿಗೆ ತಿಳಿಸಿದ. ಸಿಡಿಲು ಬಡಿದಂತಾಯಿತು. ಏನು ಮಾಡಬೇಕೆಂದು ಯಾರಿಗೂ ಹೊಳೆಯದು ರಾಜನಿಗೆ ಈ ಸುದ್ದಿಯನ್ನು ತಿಳಿಸುವುದು ಹೇಗೆ ? ಎಂಬುದೇ ದೊಡ್ಡ ಸಮಸ್ಯೆಯಾಯಿತು.

ಏಳು ಗಂಟೆಯ ಸಮಯ. ರಾಜ ಬೆದರಿ ಧಿಗ್ಗನೆದ್ದ.

" ಗಂಟೆಯೆಷ್ಟು ಸೀತಾರಾಮು. ಬಹಳ ಹೊತ್ತು ಮಲಗಿ ಬಿಟ್ಟೆನೇ ? "

" ಇಲ್ಲ. ಈಗ ಇನ್ನೂ ಏಳೇ ಗಂಟೆ. "

ತನ್ನ ಗೆಳೆಯರೆಲ್ಲಾ ಸೇರಿದ್ದುದನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು.

" ಮುಖ ತೊಳೆದುಕೋ ರಾಜ. "

ಮುಖ ತೊಳೆದುಕೊಂಡ. ಸೀತಾರಾಮು ಒಂದು ಕಪ್ಪು ಕಾಫಿ ತಂದು ಕೈಗಿತ್ತ.

" ಹೊತ್ತಾಯಿತು. ಇನ್ನು ಆಸ್ಪತ್ರೆಗೆ ಹೋಗುತ್ತೇನೆ. "

ದೇವದಾಸ ಹತ್ತಿರ ಬಂದು ಗೆಳೆಯನನ್ನಪ್ಪಿ ಹಿಡಿದ. ರಾಜನಿಗೆ ಅರ್ಥವಾಗಲಿಲ್ಲ.

" ಏಕೆ, ದೇವದಾಸ್ ? "

" ಧೈರ್ಯ ತಂದುಕೊಳ್ಳಬೇಕು ರಾಜಣ್ಣ " ಎಂದು ಸೀತಾರಾಮು ಹೇಳಿದ.

ಮತ್ತಷ್ಟು ಭಯ ರಾಜನನ್ನಾವರಿಸಿತು. " ಏನಾಯಿತು ? " ಎಂದ.

" ತಂಗಿಯ ಕಷ್ಟವೆಲ್ಲಾ ಪರಿಹಾರವಾಯಿತು " ಎಂದು ದೇವದಾಸ ಹೇಳಿದ.

ರಾಜನಿಗೆ ಏನೂ ತೋರಲಿಲ್ಲ. ಮಾತು ನಿಂತು ಹೋಯಿತು. ದೇಹಾದ್ಯಂತವೂ ಬೆವರಿತು. ಕಣ್ಣುಗಳಲ್ಲಿ ನೀರೂ ಮೂಡಲಿಲ್ಲ. ಸ್ವಲ್ಪ ಹೊತ್ತು ಕಳೆಯಿತು. ರಾಜ ಕಳಾಹೀನವಾದ ದೃಷ್ಟಿಯಿಂದ " ತಂದೆಯವರಿಗೆ ಹೇಳಿ ಕಳಿಸಬೇಕಾಗಿತ್ತು " ಎಂದ.

" ಹೇಳಿ ಕಳುಹಿಸಿದೆ. ಅವರಿಂದ ಮರುತ್ತರವೇ ದೊರೆಯಲಿಲ್ಲವಂತೆ. "

" ನನ್ನ ಸೀತೆಯನ್ನು ಮನೆಗೆ ಕರತರಬೇಡವೇ ಸೀತಾರಾಮು. "

" ಅದನ್ನು ನಾವು ನೋಡಿಕೊಳ್ಳುತ್ತೇವೆ. "

ರಾಜನೊಂದಿಗೆ ಎಲ್ಲರೂ ಆಸ್ಪತ್ರೆಗೆ ತೆರಳಿದರು. ಆಸ್ಪತ್ರೆಯ ವಿಧಿಗಳು ಮುಗಿದವು. ವಾರ್ಡಿನ ಬಿಲ್ ಹಣವನ್ನೂ ತೆತ್ತುದಾಯಿತು. ದೇಹವನ್ನು ಒಂದು ಟ್ಯಾಕ್ಸಿಯಲ್ಲಿ ಹಾಕಿಕೊಂಡು ರಾಜನ ಮನೆಗೆ ಕರೆತಂದರು.

ನಿದ್ರಿಸುತ್ತಾ ಮಲಗಿದ್ದಂತಿದ್ದ ತನ್ನ ಸೀತೆಯ ಚಿರ ಹಸನ್ಮುಖವನ್ನು ರಾಜ ದಿಟ್ಟಿಸಿ ನೋಡಿದ.

" ಮತ್ತೆ ಮನೆಗೆ ಕರೆದುಕೊಂಡು ಹೋಗುತ್ತೀರಾ ಎಂದು ಕೇಳಿದೆ

ಚಿನ್ನಾ, ಇದೋ ಕರೆದುಕೊಂಡು ಬಂದಿದ್ದೇನೆ." ಎಂದು ಹೇಳಿದ. ದುಃಖದ ಕೊಡ ತುಂಬಿ ತುಳುಕದಂತಾಗಿತ್ತು. ಆಗ ಯಾರೋ ಬಂದು ಬುಜ ಮುಟ್ಟಿದಂತಾಯಿತು. ಹಿಂತಿರುಗಿ ನೋಡಿದ— ನೀಲಾ. ಅವಳನ್ನು ಕಂಡೊಡನೆಯೇ ತುಂಬಿದ್ದ ದುಃಖ ಉಕ್ಕಿ ಬಂತು. ಅವಳೂ ತನ್ನ ಕಣ್ಣೀರಿನ ತರ್ಪಣವನ್ನು ಮಲಗಿದ್ದ ದೇವಿಗೆ ಎರೆದಳು. ಯಾವ ರೀತಿ ಅವನಿಗೆ ಸಮಾಧಾನ ಹೇಳಬೇಕೋ ಯಾರೂ ಅರಿಯರು. ಹೊತ್ತು ಏರುತ್ತಿತ್ತು. ನೀಲಾ ಮೆಲ್ಲನೆ

"ನೀವು ಒಂದು ಗಳಿಗೆ ಹೊರಗೆ ಕುಳಿತರೆ..........."

ಆಗಲೆಂದು ಹೊರಗೆ ಬಂದ. ನೀಲಾ ಸೀತಮ್ಮನಿಗೆ ಸ್ನಾನಮಾಡಿಸಿ, ತಲೆ ಬಾಚಿ ಹೂ ಮುಡಿಸಿ, ಹಣೆಯ ತುಂಬ ಕುಂಕುಮ, ಕೆನ್ನೆಯ ತುಂಬ ಅರಿಶಿನವಿಟ್ಟು ಅಲಂಕರಿಸಿದಳು. ಹೊಸ ಸೀರೆಯೊಂದನ್ನುಡಿಸಿದಳು........... ಹೊರಗಡೆ ಗೆಳೆಯರು ಮುಂದಿನ ವ್ಯವಸ್ಥೆ ಮಾಡುತ್ತಿದ್ದರು. ಸಾಲಂಕೃತಳಾದ ತನ್ನ ದೇವಿಯನ್ನು ರಾಜ ಬಂದು ನೋಡಿದ. ಭಕ್ತಿಯಿಂದ ಕೈ ಮುಗಿದ.

"ನನ್ನ ಭಾಗ್ಯಲಕ್ಷ್ಮಿ ನನ್ನನ್ನು ಬಿಟ್ಟು ಹೋಗುತ್ತಿದ್ದಾಳೆ" ಎಂದ. ಪಕ್ಕದಲ್ಲಿದ್ದ ಪಂಚಪಾಳದಿಂದ ಕುಂಕುಮವನ್ನೆತ್ತಿಕೊಂಡು ಅವಳ ಹಣೆಗೆ ತಾನೇ ಕುಂಕುಮ ಹಚ್ಚಿದ.

ಗೆಳೆಯರು ಬಂದು ಎಚ್ಚರಿಸಿದರು. ರಾಜನೊಮ್ಮೆ ಅವರನ್ನು ಆರ್ತನಾಗಿ ನೋಡಿದ.

"ಇನ್ನು..........." ಎಂದರು.

"ಕಳುಹಿಸಿಕೊಟ್ಟು ಬಿಡುತ್ತೀರಾ." ಎಂದ. ಎಲ್ಲರ ಕಣ್ಣಲ್ಲಿಯೂ ಹನಿ ತುಂಬಿತು.

"ಹೋಗಿ ಬರುವೆಯಾ ಚಿನ್ನಾ. ನನ್ನನ್ನು ಇಲ್ಲಿ ಬಿಟ್ಟು..........."

ನೀಲಾ ಶುಭ್ರ ವಸ್ತ್ರವೊಂದನ್ನು ತೆಗೆದುಕೊಂಡು ಸೀತಮ್ಮನಿಗೆ ಹೊದೆಸಿದಳು. ಗೆಳೆಯರು ತಮ್ಮ ತಂಗಿಯನ್ನು ಹೊತ್ತರು.

ಚಿತೆಯ ಮೇಲೆ ಕೂಡ ಮಹಾಸತಿಯಂತೆ ಸೀತಮ್ಮ ಅದೇ ಶಾಂತ ಮುದ್ರೆಯಿಂದ ಮಲಗಿದ್ದಳು. ರಾಜ ಎದೆ ಕಲ್ಲುಮಾಡಿದ. ಹಿಂದೆ ಪ್ರೇಮ ಜ್ವಾಲೆಯನ್ನು ಹತ್ತಿಸಿದಂತೆ ಇಂದು ತಾನೇ ಕಯ್ಯಾರ ಮೃತ್ಯುಜ್ವಾಲೆಯನ್ನು ಹತ್ತಿಸಿದ. ದಹಿಸುತ್ತಿದ್ದ ಆ ದೇಹದೊಂದಿಗೆ ಸುಟ್ಟು ಹೋಗುತ್ತಿದ್ದ ತನ್ನ ಬಾಳನ್ನು ನೋಡುತ್ತ ಕುಳಿತ. ಉರಿ ಹತ್ತಿ ಎಲ್ಲೆಡೆಯಲ್ಲಿಯೂ ಪಸರಿಸಿತು. ಅಲ್ಲಿ ಮೃತದೇಹವೊಂದು ಬೆಂಕಿಗೆ ಸಿಕ್ಕಿತು; ಇಲ್ಲಿ ಸಜೀವ ಆತ್ಮವೊಂದು ಬೆಂಕಿಗೆ ಬಿದ್ದಿತ್ತು. ರಾಜ ಶೂನ್ಯ ಮೂರ್ತಿಯಾಗಿ ಬಿಟ್ಟಿದ್ದ................ ಸ್ವಲ್ಪ ಹೊತ್ತು ಕಳೆಯಿತು............ಚಿತೆಯಿಂದ ಶಬ್ದವಾಯಿತು............ ಅದನ್ನು ಕೇಳಿ ರಾಜ ಝುರ್ಝುರಿಸಿದ — ಮರುಕ್ಷಣವೇ ಸ್ಮೃತಿ ತಪ್ಪಿ ಬಿದ್ದುಬಿಟ್ಟ. ಸಮೀಪದಲ್ಲಿದ್ದ ಗೆಳೆಯರು ಅವನನ್ನು ಹಿಡಿದೆತ್ತಿ ಮನೆಗೆ ಸಾಗಿಸಿದರು.

೧೮

ರಾಜ ಮನೆಯಲ್ಲಿ ಉಳಿಯುವುದು ಸಾಧ್ಯವೇ ಇರಲಿಲ್ಲ. ಗೆಳೆಯರು ತಮ್ಮೊಳಗೇ ಆಲೋಚಿಸಿ ಒಂದು ಇತ್ಯರ್ಥಕ್ಕೆ ಬಂದರು. ಹೇಗೂ ದೇವದಾಸ್ ಒಬ್ಬನೇ ಇದ್ದ. ಅವನ ಜತೆ ರಾಜ ಇರುವುದೆಂದು ನಿಷ್ಕರ್ಷೆಯಾಗಿತ್ತು. "ಬೇಕು — ಬೇಡ" ಎಂದು ಹೇಳುವ ಶಕ್ತಿಯೂ ರಾಜನಿಗುಳಿದಿರಲಿಲ್ಲ. ಅವರು ಹೇಳಿದ್ದಕ್ಕೆ ಒಪ್ಪಿಕೊಂಡು ದೇವದಾಸನ ಮನೆಯಲ್ಲಿರತೊಡಗಿದ. ನೀಲಾ ಮೇಲಿಂದ ಮೇಲೆ ಬಂದು ಅವನನ್ನು ಸಂತೈಸುತ್ತಿದ್ದಳು. ಕಛೇರಿಗೆ ರಾಜೀನಾಮೆ ಬರೆದು ಕಳುಹಿಸಿದ. ಗೆಳೆಯರು ಅವನನ್ನು ಎಡೆಬಿಡುತ್ತಿರಲಿಲ್ಲ. ದೇವದಾಸ್ ಇಲ್ಲದ ವೇಳೆಯಲ್ಲಿ ಯಾರಾದರೂ ಒಬ್ಬರು ಅವನ ಜತೆಯಲ್ಲೇ ಇರುತ್ತಿದ್ದರು. ಒಂದು ದಿನ ದೇವದಾಸನನ್ನು ಕುರಿತು "ಇನ್ನು ನಾನು ಹೋಗಲು ನೀವೆಲ್ಲಾ ಅಪ್ಪಣೆ ಕೊಡಬೇಕು." ಎಂದ.

"ಎಲ್ಲಿಗೆ?"

"ನನ್ನ ಕರ್ಮ ಎಲ್ಲಿಗೆ ಒಯ್ಯುವುದೋ ಅಲ್ಲಿಗೆ."

"ದೇಶಾಂತರವೇ?"

"ನನಗಿನ್ನು ದೇಶವೇನು — ದೇಶಾಂತರವೇನು?"

" ನಿನ್ನ ಸ್ವಾತಂತ್ರ್ಯಕ್ಕೆ ನಾವು ಯಾರೂ ಅಡ್ಡಿ ಬರುವುದಿಲ್ಲ ರಾಜಣ್ಣ ಆದರೆ ಎಲ್ಲಿಗೆ ಹೋಗುವೆ ತಿಳಿಸು. "

" ದೇವದಾಸ್, ನೀವು ನಾಲ್ವರೂ ನನ್ನ ಪುಣ್ಯದ ನಾಲ್ಕು ಮುಖಗಳು, ತಂದೆ, ಸ್ವಜನ ಎಲ್ಲರೂ ಕೈ ಬಿಟ್ಟಾಗ ನನ್ನ ಕೈ ಹಿಡಿದವರು. ನನ್ನ ಅತ್ಯಂತ ಸಂಕಟ ಸಮಯದಲ್ಲಿ ಜತೆಯಲ್ಲಿ ನಿಂತು ದುಃಖ ಭಾಗಿಗಳಾದಿರಿ. ನಿಮ್ಮ ಉಪಕಾರಕ್ಕೆ ಯಾವ ಜನ್ಮದಲ್ಲಿಯೂ ನಾನು ಪ್ರತಿಯಾಗಿ ಏನನ್ನೂ ಕೊಡಲಾರೆ. ಆದರೆ........ ...ಇನ್ನು ನನ್ನನ್ನು ಬಿಟ್ಟು ಕೊಡಬೇಕು. "

" ನಾಲ್ಕು ದಿವಸ ಹೋಗಲಿ ರಾಜಣ್ಣ. ಕಾಲ ಮಹಾಧನ್ವಂತರಿಯಂತೆ. ನಿನ್ನ ದುಃಖ ಕೊಂಚ ಉಪಶಮನವಾಗಲಿ. ಆ ವೇಳೆ ಬೇಕಾದಲ್ಲಿಗೆ ಹೋಗು. ಬೇಡವೆನ್ನುವವರು ಯಾರು ? "

ಬುಳ್ಳಪ್ಪನಿಂದ ಕಾಗದ ಬಂದಿತ್ತು. ಅವನ ಕಂಪೆನಿ ಹಾಸನದಲ್ಲಿ ಕ್ಯಾಂಪು ಮಾಡಿದ್ದುದರಿಂದ ನಡೆದ ಸಂಗತಿ ಅವನಿಗೆ ಬಹಳ ತಡವಾಗಿ ತಿಳಿದಿತ್ತು. ತನ್ನ ಸಂತಾಪವನ್ನು ಸೂಚಿಸಿ, ಕೂಡಲೆ ಬಂದು ತನ್ನ ಜತೆಯಲ್ಲಿರಬೇಕೆಂದು ಬರೆದಿದ್ದ. " ಅವನಲ್ಲಿ ಹೋಗೋಣವೇ ? " ಎಂಬ ಚಿಂತೆಯೂ ರಾಜನಿಗೆ ಹುಟ್ಟಿತ್ತು.

ಮುಂದೆ ರಾಜ ಏನು ಮಾಡುತ್ತಾನೆಂಬುದು ಎಲ್ಲರಿಗೂ ಬೇಕಾಗಿದ್ದ ವಿಷಯವಾಗಿತ್ತು. ಎಲ್ಲರ ಪರವಾಗಿ ನೀಲಾ ಪ್ರಶ್ನೆ ಮಾಡಿದಳು.

" ಹೀಗೆ ದುಃಖದಲ್ಲಿಯೇ ಆಯುಸ್ಸನ್ನು ಸವೆಸುವಿರಾ ? "

" ಇನ್ನೇನು ಮಾಡಲಿ ಹೇಳು. ಏನು ಮಾಡುವುದಕ್ಕೂ ನನಗೆ ಚೈತನ್ಯವಿಲ್ಲವಾಗಿದೆ. "

" ನಿಮ್ಮ ಆಸೆ — ಕನಸೇನಾಯಿತು. "

" ಒಡೆದು ಹೋಯಿತು. "

" ಅದು ಒಡೆದಿಲ್ಲ. ನೀವು ಪ್ರಯತ್ನ ಪೂರ್ವಕವಾಗಿ ಒಡೆಯುತ್ತಿರುವಿರಿ.

" ನಾನು ದುಃಖವನ್ನು ಆಶ್ರಯಿಸಿಲ್ಲ ನೀಲಾ, ಅದು ನನ್ನನ್ನು ಆಶ್ರಯಿಸಿದೆ. "

" ನೀವು ಹೀಗಿದ್ದರೆ ಸ್ವರ್ಗದಲ್ಲಿರುವ ಆ ನನ್ನ ತಾಯಿಗೆ ಸಂತೋಷ ವಾಗುತ್ತದೆಯೇ ? "

" ನಾನು ಅವಳಿಗೆ ಅನ್ಯಾಯ ಮಾಡಿಲ್ಲ ನೀಲಾ — ಒಂದು ಸಲ ತಪ್ಪಿ ನಡೆದೆ — ಅದೇನೆಂದು ಮತ್ತೆ ಮತ್ತೆ ಕೇಳಿದಳು. ಕಾಲ ಬಂದಾಗ ಹೇಳು ತ್ತೇನೆಂದೆ. ಆ ಕಾಲ ಬರಲೇ ಇಲ್ಲ. "

" ಕಳೆದುದನ್ನು ಯೋಚಿಸಿ ಏನು ಸಾರ್ಥಕ. ನಿಮ್ಮ ನಷ್ಟ, ದುಃಖ ಯಾರಿಂದಲೂ ಸರಿಗೊಳ್ಳಲು ಸಾಧ್ಯವಿಲ್ಲ. ಅದನ್ನು ಮರೆಯಲು ನೀವೇ ಮನಸ್ಸು ಮಾಡಬೇಕು. "

" ಹೇಗೆ ಮಾಡಲಿ. "

" ಕರ್ತವ್ಯದ ಕಡೆಗೆ ಲಕ್ಷ್ಯವಿಟ್ಟು. "

" ಯಾರಿಗಾಗಿ ಕರ್ತವ್ಯ — ಧರ್ಮ............"

" ಜಗತ್ತಿಗಾಗಿ............ನಿಮ್ಮ ಲಕ್ಷ್ಮೀಗಾಗಿ. '

" ನನ್ನ ಭಾಗಕ್ಕೆ ಜಗತ್ತು ಒಂದು ಸ್ಮಶಾನ. "

" ಹೌದು. ಆದರೆ ಸ್ಮಶಾನದಲ್ಲಿ ಶಿವನು ವಾಸಿಸುವುದು. "

" ನನಗೆ ಶಿವನಿಲ್ಲ — ನಾನು ನಾಸ್ತಿಕ. "

" ನಿಮ್ಮ ಸತಿಯೇ ನಿಮ್ಮ ಶಿವ............ನೀವು ಜಗತ್ತಿನ ಸೇವೆ ಮಾಡಬೇಕೆಂದು ಅವರೇ ಬಯಸುತ್ತಿದ್ದಾರೆ. ನೀವು ಜಗತ್ತಿಗೆ ಮಾಡುವ ಸೇವೆ ಅವರಿಗೆ ಮುಟ್ಟುತ್ತದೆ. ಅದರಿಂದ ಅವರಿಗೆ ಅಪರಿಮಿತವಾದ ಆನಂದ ವಾಗುತ್ತದೆ. "

" ಹೇಗೆ ? "

" ನಿಮ್ಮ ಕಲೆಯಿಂದ ಕೊರಡನ್ನು ಕೊನರಿಸಬಲ್ಲಿರಿ. ಭಗ್ನ ಹೃದಯ ಗಳನ್ನು ಮತ್ತೆ ವಸಂತವನವನ್ನಾಗಿಸಬಲ್ಲಿರಿ. ಎಲ್ಲರ ಹೃದಯದಲ್ಲಿಯೂ ಆನಂದ ತುಂಬಿ, ತುಳುಕುವಂತೆ ಮಾಡಬಲ್ಲಿರಿ. ಜಗತ್ತು ನಲಿದರೆ ನಿಮ್ಮ ಹೃದಯ ಲಕ್ಷ್ಮಿಯೂ ಹಿಗ್ಗುತ್ತಾಳೆ. ಜಗತ್ತಿಗೆ ಸಂತೃಪ್ತಿಯಾದರೆ ಆ ತಾಯಿಗೂ ತೃಪ್ತಿ. ಅವರು ಜೀವಂತರಾಗಿದ್ದರೆ ನೀವು ಹೀಗೆ ನಿರ್ವಿಣ್ಣರಾಗು

ತ್ತಿದ್ದಿರಾ. ಅವರು ಸತ್ತರೆಂದು ನೀವು ಭಾವಿಸುವುದೂ ಒಂದು ಬಗೆಯ ಅಪಚಾರವಲ್ಲವೇ ? "

" ಇಲ್ಲ ನೀಲಾ. ನನ್ನ ದೇವಿಗೆ ನಾನು ಎಂದಿಗೂ ಅಪಚಾರ ಮಾಡು ವುದಿಲ್ಲ" ಎಂದು ಹೇಳಿದನು. ನೀಲಮ್ಮನಿಗೂ ಸ್ವಲ್ಪ ಶಾಂತಿ ದೊರೆ ತಂತಾಯಿತು.

ದೇವದಾಸ್ ಒಡ ಹುಟ್ಟಿದವನಿಗಿಂತಲೂ ಹೆಚ್ಚಿನ ಪ್ರೀತಿ ವಿಶ್ವಾಸಗಳಿಂದ ರಾಜನನ್ನು ನೋಡಿಕೊಳ್ಳುತ್ತಿದ್ದ. ತನ್ನ ಕಛೇರಿಯ ವೇಳೆಯನ್ನುಳಿದು ಮಿಕ್ಕ ಎಲ್ಲಾ ಕಾಲಗಳಲ್ಲಿಯೂ ಅವನ ಜತೆಗೇ ಇರುತ್ತಿದ್ದ. ತಾನಿಲ್ಲ ದಿದ್ದಾಗ ಬೇಸರವಾಗದಿರಲೆಂದು ಲೆಕ್ಕವಿಲ್ಲದಷ್ಟು ಪತ್ರಿಕೆ, ಪುಸ್ತಕಗಳನ್ನು ತಂದು ಹಾಕಿದ್ದ. ಕಾವ್ಯಾವಲೋಕನ, ಸಂಗೀತ ಅಭ್ಯಾಸ, ರಾಜನ ವಿರಾಮ ವನ್ನು ಲಾಭಪ್ರದವಾಗಿ ಮಾಡಿದ್ದವು. ನೀಲಾ ಮುತ್ತಿನಂತಹ ಒಂದು ಮಾತನ್ನಾಡಿದ್ದಳು. ಅವಳು ಆಡಿದ ಹೊತ್ತು, ರೀತಿ ಬಹಳ ಪ್ರಶಸ್ತ ವಾದದ್ದು. ರಾಜನ ಇಡೀ ಜೀವನವನ್ನೇ ಆ ಮಾತು ಮಾರ್ಪಡಿಸಿತ್ತು. ಗುರಿಯನ್ನರಿಯದೆ ಅಂಡಲೆಯುತ್ತಿದ್ದ ಆತ್ಮಕ್ಕೆ ಒಂದು ನಿಲುಗಡೆ ಸಿಕ್ಕಿ ದಂತಾಗಿತ್ತು.

" ಅವರು ಸತ್ತರೆಂದು ನೀವು ಭಾವಿಸುವುದೂ ಒಂದು ಬಗೆಯ ಅಪಚಾರವಲ್ಲವೇ ? "

ಸೀತಾ ತೀರಿಕೊಂಡಿರಲಿಲ್ಲ. ಅವಳ ದೇಹ ಕಣ್ಮರೆಯಾಗಿತ್ತು. ಆದರೆ ಅವಳು ಕಣ್ಮರೆಯಾಗಿರಲಿಲ್ಲ. ನಿಂತರೆ ಕುಳಿತರೆ ಎದುರಿಗೆ ಬಂದು ನಿಲ್ಲು ತ್ತಿದ್ದಳು. ತಾನು ದಣಿದಾಗ, ಸೋತಾಗ, ಚಿಂತೆಗೊಳಗಾದಾಗ ಅವಳ ಮೃದು ನುಡಿ, ಅವಳ ಸ್ನಿಗ್ಧರೂಪ, ಅವಳ ನಿರ್ಮಲ ಅಂತಃಕರಣ ಅವನನ್ನು ಸಂತೈಸುತ್ತಿದ್ದವು. ಅವನ ಜೀವನ ಧ್ಯೇಯವನ್ನು ಸದಾ ಜ್ಞಾಪಿಸಿಕೊಟ್ಟು ಆ ಕಡೆಗೆ ಗಮನ ಕೊಡಬೇಕೆಂದು ಪ್ರೇರೇಪಿಸುತ್ತಿದ್ದವು. ಹಿಂದೊಮ್ಮೆ " ನಾನು ನಾಟಕದವನಾದರೆ ನಿನಗೆ ವ್ಯಥೆಯೇ ? " ಎಂದು ತಾನು ಕೇಳಿ ದ್ದಕ್ಕೆ " ನೀವು ಬೇಕಾದ್ದು ಆದರೂ ನನಗೆ ವ್ಯಥೆಯಿಲ್ಲ. ಅವಮಾನವಿಲ್ಲ " ಎಂದು ಸೀತಾ ನುಡಿದಿದ್ದಳು. ನಾನೀಗ ನಾಟಕ ಸೇರಿದರೆ ಅವಳು ವ್ಯಥಿಸು

ವುದಿಲ್ಲ. ಆದರಿಂದ ಅವಳಿಗೆ ವ್ಯಥೆಯಾಗದ ಹಾಗೆ ನೋಡಿಕೊಳ್ಳುತ್ತೇನೆ. ನನ್ನಿಂದ ನಾಟಕ ಜೀವನದಲ್ಲಿ ಮೂಡಿರುವ ಹೊಲಸು ಹೋಗುವಂತಾಗ ಬೇಕು. ಕ್ರಿಮಿ ಕೀಟಗಳು ತುಂಬಿರುವ ಆ ತಾಯಿ ಗುಡಿಯಲ್ಲಿ ದೀಪ ಧೂಪ ಗಳು ತುಂಬಬೇಕು. ಹಾಗೆ ಮಾಡುತ್ತೇನೆ. ಆಗಲೇ ನನ್ನ ಆತ್ಮಕ್ಕೆ ಶಾಂತಿ, — ಸೀತನ ಆತ್ಮಕ್ಕೂ ತೃಪ್ತಿ, ಎಂದು ಯೋಚಿಸಿದನು.

ದೇವದಾಸ ಮತ್ತು ಇತರ ಗೆಳೆಯರ ಮೂಲಕ ನಾಟಕಗ್ರಂಥಗಳು, ಅವುಗಳ ಮೇಲಣ ವಿಮರ್ಶಾಗ್ರಂಥಗಳು, ನಾಟಕ ತಂತ್ರ, ರಂಗರಚನೆಯ ಮೇಲೆ ತಜ್ಞರು ಬರೆದಿದ್ದ ಗ್ರಂಥಗಳು ಹೇರಳವಾಗಿ ದೊರೆತವು. ಕ್ರಮಾಗತ ವಾಗಿ ಅವುಗಳನ್ನು ಓದಲು ಮೊದಲಿಟ್ಟ. ತಂತ್ರ ದೃಷ್ಟಿಯಿಂದ ನಮ್ಮ ರಂಗಭೂಮಿ ಎಷ್ಟು ಹಿಂದುಳಿದಿದೆಯೆಂಬುದರ ಅರಿವಾಯಿತು. ಯಾವ ಸೌಕರ್ಯವೂ ಇಲ್ಲದೆ ಬೆಂಗಳೂರಿನಲ್ಲಿ ಆಡಿದ ಆಲೆನ್ ಕ್ವಾರ್ಟರ್‌ಮೇಯಿನರ ನಾಟಕಗಳೇ ಪ್ರದರ್ಶನ ದೃಷ್ಟಿಯಿಂದ ಅಷ್ಟು ಸೊಗಸಾಗಿದ್ದವು. ಇನ್ನು ಫ್ರಾನ್ಸ್, ಇಂಗ್ಲೆಂಡ್, ಅಮೇರಿಕಾ ದೇಶಗಳಲ್ಲಿ ಅವೇ ಎಷ್ಟು ಚೆನ್ನಾಗಿರ ಬಹುದು. ಇಂಗ್ಲೆಂಡ್, ಅಮೇರಿಕಾ ಹುಟ್ಟಲಿಕ್ಕೆ ಎಷ್ಟೋ ಶತಮಾನಗಳ ಮುಂಚೆ ನಮ್ಮ ನಾಟಕಕಲೆ ಹುಟ್ಟಿತ್ತು. ಭರತಾದಿ ಋಷಿಗಳು ತಂತ್ರ ವಿಜ್ಞಾನವನ್ನು ಬರೆದರು. ನಟರಾಜ, ರಂಗಧಾಮರೇ ನಾಟಕ ಕಲೆಯನ್ನು ಆಶ್ರಯಿಸಿ ಗೌರವಿಸಿದರು. ಭಾಸ, ಕಾಳಿದಾಸ, ಭವಭೂತಿ ಮೊದಲಾದ ಮಹಾಕವಿಗಳು ನಾಟಕ ಸಾಧನವನ್ನು ಉಪಯೋಗಿಸಿಕೊಂಡರು. ಅಂತಹ ಕಲೆ ಇಂದು ಕೀಳು ಜನಗಳ ಕೈಗೆ ಸಿಕ್ಕಿದೆ. ಅವರ ಚಾಪಲ್ಯವನ್ನೂ ಪೂರೈ ಸುವ ಸಾಧನವಾಗಿದೆ. ಹಲವು ಹುಂಬರಿಗೆ ಹೊಟ್ಟೆತುಂಬುವ ಒಂದು ವ್ಯಾಪಾರವಾಗಿದೆ.

ಹೌದು. ವಸ್ತುಸ್ಥಿತಿ ಯಾರಿಗೂ ತೃಪ್ತಿಯನ್ನುಂಟುಮಾಡುವಂತಿಲ್ಲ. ಆದರೆ ಸುಮ್ಮನೆ ಕುಳಿತು ಚಿಂತಿಸಿ ಫಲವೇನು?—ತಪ್ಪೋ ನೆಪ್ಪೋ ಬುಳ್ಳಪ್ಪ ನಂಥವರು ಆ ಕಲೆಯನ್ನು ಯಮಪಾಶದಿಂದಾದರೂ ರಕ್ಷಿಸಿದ್ದಾರೆ. ಅವರೂ ಇಲ್ಲದಿದ್ದರೆ ಹೆಸರು ಹೇಳುವುದಕ್ಕೂ ನಾಟಕಕಲೆ ಉಳಿಯುತ್ತಿರಲಿಲ್ಲ. ಹೊರಗೆ ನಿಂತುಕೊಂಡು ಅವರ ಪ್ರಯತ್ನ, ಜೀವನವನ್ನು ನಿಂದಿಸಿದರೆ ಏನು ಪ್ರಯೋಜನ. ಅವರೊಂದಿಗೆ ಸೇರಿ ಪರಿಸ್ಥಿತಿಯನ್ನು ಸುಧಾರಿಸಬೇಕು.

ಬುಳ್ಳಪ್ಪನ ಕರೆ ರಾಜನ ವಿಚಾರಸರಣಿಗೆ ಉತ್ತೇಜನ ಕೊಟ್ಟಿತ್ತು. "ನನ್ನನ್ನು ಕರೆದುಕೊಳ್ಳುವುದಕ್ಕೆ ಬುಳ್ಳಪ್ಪನೂ ಉತ್ಸುಕನಾಗಿದ್ದಾನೆ. ದೇವರೇ ದಾರಿ ತೋರಿಸಿದಂತಾಗಿದೆ. ಒಣ ಮರ್ಯಾದೆಯ ಮೇಲೆ ನಿಂತು ಕರ್ತವ್ಯವನ್ನು ಮರೆಯುವುದೇ?" ಎಂದುಕೊಂಡು ಅಂದೇ ಬುಳ್ಳಪ್ಪನಿಗೆ ಕಾಗದ ಬರೆದ, "ಹಾಸನದ ಕ್ಯಾಂಪು ತೀರಿಸಿಕೊಂಡು ನೀವು ಮೈಸೂರಿಗೆ ಬರುವುದನ್ನು ತಿಳಿಸಿದರೆ ಬಂದು ಸೇರುತ್ತೇನೆ" ಎಂದು.

ರಾಜ ತನ್ನ ನಿರ್ವಿಣ್ಣತೆಯನ್ನು ಬದಿಗೊತ್ತಿ ಮತ್ತೆ ಚೇತರಿಸಿಕೊಂಡು ದ್ದನ್ನು ಕಂಡು ಅವನ ಗೆಳೆಯರು ಸಂತೋಷಿಸಿದರು. ಆದರೆ ಬುಳ್ಳಪ್ಪನ ಕಂಪೆನಿ ಸೇರುತ್ತಾನೆಂಬ ಸುದ್ದಿ ಕೇಳಿ ಅವರ ಉತ್ಸಾಹ ಸ್ವಲ್ಪ ಕುಂದಿತು. ಅಚ್ಯುತನಂತೂ ಇದು ಅವನತಿಯ ದಾರಿ ಎಂದು ದುಃಖಿಸಿದ.

ಸಕಾಲಕ್ಕೆ ತಲುಪಿದ ರಾಜನ ಕಾಗದವನ್ನು ನೋಡಿ ಬುಳ್ಳಪ್ಪ ಸಂತೋಷಿಸಿದ. ಆದರೆ ಅವನ ಕಂಪೆನಿಯ ಜನಕ್ಕೆ ಆ ಸುದ್ದಿ ಕರ್ಣಕಠೋರವಾಯಿತು. ಶಾಕುಂತಲ ನಾಟಕದಲ್ಲಿ ರಾಜನ ಪಾತ್ರವನ್ನು ಅವರು ಕಂಡಿದ್ದರು. ಅವನು ಬಂದು ಕಂಪೆನಿ ಸೇರಿದರೆ ರಾಜಾಪಾರ್ಟುಗಳೆಲ್ಲಾ ಅವನಿಗೇ ಮೀಸಲಾಗುವುದು. ಎಲ್ಲರೂ ಅವನನ್ನೇ ಹೊಗಳುತ್ತಾರೆ—ಎಲ್ಲಾ ಮೆಡಲುಗಳೂ ಅವನಿಗೇ ಹೋಗುತ್ತವೆ ಎಂಬ ಈರ್ಷೆ ಅವರ ಶಾಂತಿಯನ್ನು ನುಚ್ಚುನೂರಾಗಿಸಿತು.

ಅಸಹನೆ ಎಲ್ಲರಿಗಿಂತಲೂ ಹೆಚ್ಚಾಗಿ ರಾಣಿಪಾರ್ಟಿನ ಅತ್ತಿಗುಪ್ಪೆ ನೀಲಕಂಠ, ಸುಡುಗಾಡು ಸೂರಪ್ಪ ಇವರಲ್ಲಿ ಉದಯಿಸಿತು. ನೀಲಕಂಠನ ರಾಣಿಪಾರ್ಟು ಜಾತ್ರೆಯ ಜನಗಳಿಗೂ ಬೇಸರವಾಗುತ್ತ ಬಂದಿತ್ತು. ಹೋದ ಹೋದ ಕಡೆ ಕಂಪೆನಿಗೆ ಬಹಳ ನಷ್ಟ ತಗಲುತ್ತ ಬಂತು. ಇದನ್ನು ಕಂಡು ಬುಳ್ಳಪ್ಪ ನೀಲಕಂಠನನ್ನು ಪುರುಷ ಪಾತ್ರಗಳಿಗೆ ಹಾಕಿ, ಅವನ ಸ್ಥಾನಕ್ಕೆ ತಿರುಮಕೂಡ್ಲು ಪುಟ್ಟಾಸಾನಿ ಅವಳ ತಂಗಿ ನಂಜಿಯನ್ನು ನೇಮಿಸಿದ್ದ. ಸ್ತ್ರೀ ಪಾರ್ಟು ತಪ್ಪಿ ಪುರುಷ ಪಾರ್ಟು ಮಾಡುವ ಅವಕಾಶ ಸಿಕ್ಕಿತಲ್ಲಾ ಎಂದು ನೀಲಕಂಠನಿಗೂ ಹೊಸ ವ್ಯವಸ್ಥೆ ಸಂತೋಷವನ್ನುಂಟುಮಾಡಿತ್ತು.

"ಸ್ತ್ರೀಯರೇ ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಾರೆ" ಎಂದು ಪ್ರಕಟಿಸುವುದಕ್ಕಾರಂಭವಾದ ಮೇಲೆ ಬುಳ್ಳಪ್ಪನ ಕಂಪೆನಿಯ ಸ್ಥಿತಿಯೂ ಸುಧಾರಿ

ಸುತ್ತಾ ಬಂತು. ನಾಟಕದ ನೆಪದಿಂದ ಸ್ತ್ರೀಯರನ್ನು ನೋಡಿ ಹೋಗುವುದಕ್ಕೆ ಜನ ಕಿಕ್ಕಿರಿದು ತುಂಬುತ್ತಿದ್ದರು.

ನೀಲಕಂಠನ ಸ್ಥಾನಕ್ಕೆ ಎಲ್ಲಾ ರೀತಿಯಲ್ಲಿಯೂ ಪುಟ್ಟಾಸಾನಿಯೇ ಸರಿಯಾದ ವ್ಯಕ್ತಿಯಾಗಿತ್ತು. ಅವಳು ಮಹಾ ಸಾಹಸ ಜೀವಿ. ತಿರುಮ ಕೂಡ್ಲಿನಲ್ಲಿ ಒಬ್ಬ ಸಾಹುಕಾರನನ್ನು ಹಿಡಿದು ೧೮–೨೦ ಜನ ಹೆಂಗಸರನ್ನು ಕೂಡಿಸಿ ಅವಳು ಹಿಂದೆ ಒಂದು ಕಂಪೆನಿ ಕೂಡಿಸಿದ್ದಳು. ಅದರಲ್ಲಿ ತಾನೇ ರಾಜಾ ಪಾರ್ಟು, ತನ್ನ ತಂಗಿ ನಂಜಿಯೇ ರಾಣಿ ಪಾರ್ಟು. ಗಂಡಸರ ತಲೆ ಮೊಟ್ಟುವಂತೆ ಹೆಂಗಸರೇ ಪುರುಷ–ಸ್ತ್ರೀ ಎಲ್ಲಾ ಪಾತ್ರಗಳನ್ನೂ ನಿರ್ವಹಿಸು ತ್ತಿದ್ದರು. ಕಂಪೆನಿ ಕೆಲವು ಕಾಲ ಅದ್ಧೂರಿಯಿಂದ ನಡೆಯಿತು. ಆದರೆ ಪ್ರವಾಸ ಹೋದ ಕಡೆ ಕಂಪೆನಿಯ ನಟವರ್ಗ ಸಂಸಾರಗಳನ್ನು ಹೊಂದಿಸಿ ಕೊಂಡು ನಿಲ್ಲುವುದಾರಂಭವಾಗಿ, ಕಂಪೆನಿಯಲ್ಲಿ ಪುಟ್ಟಾಸಾನಿ, ನಂಜಿ ಇಬ್ಬರೇ ಉಳಿಯಬೇಕಾಯಿತು. ಆ ವೇಳೆಗೆ ಸಾಹುಕಾರನ ಬಂಡವಾಳವೂ ಕರಗಿ, ವೈಯೆಲ್ಲಾ ಸಾಲವಾಗಿ ಅವನು ದೇಶಾಂತರ ಹೋಗಿಬಿಟ್ಟ. ಕಂಪೆನಿಯನ್ನು ಮುಚ್ಚಿ ಯಥಾಪ್ರಕಾರ ಊರು ಸೇರಿ ಅಕ್ಕತಂಗಿಯರು ಸುಖವಾಗಿದ್ದರು. ನೀಲಕಂಠನ ಮೇಲೆ ಜನಗಳ ಆಕ್ರೋಶ ಬಲವಾಗಲು ಬುಳ್ಳಪ್ಪ ಅವ ರನ್ನು ಕರೆದುಕೊಂಡು ಬಂದು ತನ್ನ ಕಂಪೆನಿ ಸೇರಿಸಿಕೊಂಡಿದ್ದ. ರಾಜ ಬರುವುದು ನೀಲಕಂಠನಿಗೆ ಪ್ರಾಣಸಂಕಟಕ್ಕಿಟ್ಟುಕೊಂಡಿತು. ಪುಟ್ಟಿ ಬಂದು ಸ್ತ್ರೀಪಾರ್ಟುಗಳನ್ನು ತಪ್ಪಿಸಿದ್ದಳು. ಇನ್ನು ಇವನು ಬಂದು ಪುರುಷ ಪಾರ್ಟುಗಳನ್ನು ತಪ್ಪಿಸುತ್ತಾನಲ್ಲಾ ಎಂಬ ಚಿಂತೆ ಹತ್ತಿತು. ಜನ್ಮಾರಭ್ಯ ಶತ್ರುಗಳಾಗಿದ್ದ ಸೂರಪ್ಪ, ನೀಲಕಂಠ ಈ ಮೂರನೆಯ ಶತ್ರುವಿನ ಸಲವಾಗಿ ಒಂದಾಗಿ ಮಸಲತ್ತು ಮಾಡುವುದಕ್ಕಾರಂಭಿಸಿದರು.

"ಈ ಓದಿದ ಐಗೋಳೆಲ್ಲಾ ನಾಟಕದ ಕಂಪೆನಿಯಲ್ಲಿ ಏಗ್ತ್ಯಾರ್ಯೆ?" ಎಂದು ಸೂರಪ್ಪನ ಧೈರ್ಯ. ಅದಕ್ಕೆ ನೀಲಕಂಠ "ಯಜಮಾನ್ರ ಬಲೇ ಮೋಹ ಬಂದೈತಪ್ಪಾ, ಬೆಂಗ್ಳೂರಿನಲ್ಲಿ ಅವನ ನಾಟಕ ನೋಡಿದಾರಭ್ಯ ಅಂಥಾ ಆಕ್ಟರೇ ಇಲ್ಲ ಅಂದುಕೊಂಡವ್ರೆ".

"ಅದಲ್ಲಾ ಕಣ್ಣೇ ಮರ್ಮ. ಯಜಮಾನ್ರ ಅಂದಾಜು ನಿಂಗೆ ತಿಳೀ ನಿಲ್ಲ. ತಾವು ಬಿಟ್ಟರೆ ಮುನಿವೆಂಕಟಪ್ಪನ ಕಂಪೆನಿಯೋರು ಆ ವಯ್ಯನ್ನ

ಹಾರಿಸ್ತಾರೆ, ಅದಕ್ಕೋಸ್ಕರ ನಾಲ್ಕು ದಿವಸ ಕಂಪೆನಿಯಲ್ಲಿಟ್ಟುಕೊಂಡು ಛೀಮಾರಿ ಮಾಡಿ ಆಚೆಗಟ್ಟಬೇಕೂಂತ ಯಜಮಾನ್ರ ಇರಾದೆ".

"ಅಂಗೇ ಅನ್ಕೊಂಡಿರು. ಅವನು ಪಾಲ್ಟು ಮಾಡಿ ನಾಲಕ್ಕು ಜನ ಛೇಷ್ ಅನ್ಲಿ. ನಿಂಗೂ ನಂಗೂ ತೋರಿಸ್ತಾರೆ ಯಜಮಾನ್ರು ಗೇಟ ಬಾಗಿಲ್ನ".

"ಅದಕ್ಕೆ ಮದ್ದೈತೆ ಸುಮ್ನಿರು, ಆ ಮಹಾಪುರುಸ ಬರಲಿ".

"ಏನು ಮಾಡ್ತೀ ಸೂರಪ್ಪ?"

"ಈಗ್ಬೇಡ ಸುಮ್ಕಿರೋ. ನಾನೆಲ್ಲಾ ಏಳ್ತೀನಿ."

ಹಾಸನದ ಕ್ಯಾಂಪು ಮುಗಿಸಿಗೊಂಡು ಬುಳ್ಳಪ್ಪನ ಕಂಪೆನಿ ಮೈಸೂರಿಗೆ ಬಂತು. ನವರಾತ್ರಿಗೆ ಇನ್ನೂ ಒಂದು ತಿಂಗಳಿತ್ತು. ಈಗಲೇ ಬರಬೇಕೆಂದು ಬುಳ್ಳಪ್ಪ ಮತ್ತೊಂದು ಕಾಗದವನ್ನು ರಾಜನಿಗೆ ಬರೆದ.

ರಾಜ ಹೊರಡುವುದನ್ನು ನಿಶ್ಚಯಿಸಿದ. ಗೆಳೆಯರು ವಿಧಿಯಿಲ್ಲದೆ ಸಮ್ಮತಿಸಬೇಕಾಯಿತು. ಅವನನ್ನು ಬಿಟ್ಟುಕೊಡಲು ಯಾರಿಗೂ ಸಂತೋಷವಿಲ್ಲ.

"ನಮ್ಮನ್ನು ಮರೀಬೇಡ ರಾಜಣ್ಣ" ಎಂದು ಹೇಳಿದರು. ಅದಕ್ಕೆ ಮರುನುಡಿಯಲ್ಲಿ ರಾಜನಲ್ಲಿ ಮಾತುಗಳೇ ಇರಲಿಲ್ಲ.

"ನಿನಗೆ ಏನಾದರೂ ಬೇಕಾದರೆ ಬರೆ. ಸಂಕೋಚಪಟ್ಟುಕೊಳ್ಳಬೇಡ" ಎಂದು ದೇವದಾಸ್ ಹೇಳಿದ. ರಾಜ ಗುರುಗಳನ್ನು ಕಂಡು ಅವರಿಂದ ಅಪ್ಪಣೆಯನ್ನು ಪಡೆದ.

ಇನ್ನು............ನೀಲಾ! ಅವಳು ಸುದ್ದಿಯನ್ನು ಸಮಚಿತ್ತದಿಂದ ಕೇಳಿದಳು. ತನ್ನ ಭಾವನೆಯನ್ನು ಸ್ವಲ್ಪವೂ ತೋರಗೊಡಲಿಲ್ಲ.

"ಮತ್ತೆ ಯಾವಾಗ ಬರುವಿರಿ?"

"ಯಾವಾಗ ಎಂದು ಹೇಳಲಿ, ಕಾಲ ಬಂದಾಗ............"

"ಹೋಗಿ ಬನ್ನಿ, ದೇವರು ಒಳ್ಳೆಯದು ಮಾಡಲಿ. ಆದರೆ ಆಗಿಂದಾಗ್ಗೆ ಒಂದು ಕಾಗದ............"

"ಬರೆಯುತ್ತಿರುತ್ತೇನೆ."

" ಕಲೆಯ ಧ್ಯಾನದಲ್ಲಿ ನಮ್ಮಗಳ ನೆನೆಪು ಹೋಗಲಿಕ್ಕಿಲ್ಲವಷ್ಟೇ? "

" ಅದು ಸಾಧ್ಯವೇ ? ನೀನು ಮಾಡಿದ ಉಪಕಾರಕ್ಕೆ............ "

" ಏನು ಘನ ಉಪಕಾರ. "

" ಅವಳ ಕೊನೆಯ ಯಾತ್ರೆಯನ್ನು............ "

" ದಯವಿಟ್ಟು ಆ ಪ್ರಸ್ತಾಪ ಎತ್ತಬೇಡಿ. ಅದೊಂದು ಉಪಕಾರವೆಂದು ನೀವು ಭಾವಿಸಿದರೆ ನನಗೆ ಬಹಳ ಅನ್ಯಾಯ ಮಾಡಿದಂತಾಗುತ್ತದೆ. "

" ಮುಂದೆ ನೀನು ನೀಲಾ................ "

" ಹೇಗೋ ನಡೆಯುತ್ತೆ, ಮದುವೆಯ ಕಾಲ ಬಂತು. ಒಂದೆರಡು ಕಛೇರಿಗಳು ಸಿಕ್ಕಿದರಾಯಿತು ನನ್ನ ಕಥೆ. "

" ಇನ್ನು ನಾನು ಸಂಪಾದಿಸುತ್ತೇನೆ, ನಿನಗೆ ಬೇಕಾದಾಗ ತಪ್ಪದೆ ಬರೆಯಬೇಕು. "

" ಆಗಲಿ, ಅಗತ್ಯವಿದ್ದಾಗ ತಿಳಿಸುತ್ತೇನೆ. "

" ಇನ್ನು ನನ್ನ ಬಾಳು ಬದಲಾಯಿಸುತ್ತದೆ ನೀಲಾ. ಆದರೆ ಮನಸ್ಸು ಬದಲಾಯಿಸಲಾರದು. ಈ ಪರೀಕ್ಷೆಯಿಂದ ನಾನು ಗೆದ್ದು ಬರುವೇನೋ ಇಲ್ಲವೋ ಹೇಳಲಾರೆ. ಆದರೆ ಸೋತರೂ ನಿಮ್ಮವನೆಂದು ಹೇಳಲು ನೀವು ಹಿಂಜರಿಯದಿದ್ದರೆ ಸಾಕು. ಅದೇ ನನಗೆ ದೊಡ್ಡ ಭಾಗ್ಯ. "

" ನೀವು ಗೆದ್ದು ಬರುತ್ತೀರಿ............ಗೆದ್ದೇ ಬರಬೇಕು. "

ಆ ಮಾತಿನಲ್ಲಿ ನಿರ್ಧಾರವಿತ್ತು, ಪ್ರೇಮದ ಕೆಚ್ಚಿನಿಂದ ಹೊರಡುವ ಬಲವಿತ್ತು, ಆಸೆ ನಂಬಿಕೆಗಳಿದ್ದವು. ತನ್ನ ಯೋಗ್ಯತೆಯಲ್ಲಿ ನೀಲನಿಗಿದ್ದ ಅಪಾರ ನಂಬಿಕೆಯನ್ನು ಕಂಡ ರಾಜನ ಮನಸ್ಸು ಕೃತಜ್ಞತೆಯ ಮಡು ಲಾಯಿತು. ನಿರ್ಗಮನದ ದುಃಖವನ್ನು ಅವಳ ಇನಿಮಾತು ಉಪಶಮನ ಮಾಡಿತ್ತು. ಆದರೆ 'ಬಾಳಿನಲ್ಲಿ ಶಾಂತಿಯುಂಟೇ ? ಆ ಶಾಂತಿ ನನ್ನ ಬಳಿ ಸುಳಿಯುತ್ತದೆಯೇ ?' ಎಂಬ ಸಂಶಯ ರಾಜನ ಮನಸ್ಸಿನಿಂದ ದೂರವಾಗಲಿಲ್ಲ.